# Educational Dispatch of 1854

1854ರ ಶೈಕ್ಷಣಿಕ ರವಾನೆ

ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರ ಮಂಡಲಿಯಿಂದ ಭಾರತದ ಗವರ್ನರ್ ಜನರಲ್ ಅವರಿಗೆ ರವಾನೆ (ನಂ. 49, ದಿನಾಂಕ 19ನೇ ಜುಲೈ 1854).

1. ಸಾರ್ವಭೌಮ ಶಾಸಕಾಂಗದ ಅಧಿನಿಯಮದ ಮೂಲಕ ಭಾರತ ಸರ್ಕಾರದ ಜವಾಬ್ದಾರಿಯನ್ನು ಮತ್ತೆ ನಮ್ಮ ಕೈಯಲ್ಲಿಇರಿಸಲಾಗಿದೆ. ನಮಗನಿಸುವಂತೆ ಕೆಲವು ಕೆಲಸಗಳಿಗೆ ಇದು ಅತ್ಯಂತ ಸೂಕ್ತವಾದ ಅವಕಾಶವಾಗಿದೆ. ನಾವು ಈಗಾಗಲೇ ನಡೆದಿರುವ ಪ್ರಗತಿಯನ್ನು ಪರಿಶೀಲನೆ ಮಾಡಬಹುದು. ಈಗಿರುವ ಕೊರತೆಗಳನ್ನು ತುಂಬಿಕೊಳ್ಳಬಹುದು. ಮತ್ತು ನಮ್ಮ ಸುಪರ್ದಿಗೆ ವಹಿಸಲಾದ ಜನರ ಅಂತಿಮ ಪ್ರಯೋಜನಕ್ಕಾಗಿ ಅತ್ಯಂತ ಉತ್ತಮವೆಂದು ಪರಿಗಣಿಸಿದ ಸುಧಾರಣೆಗಳನ್ನು ಅಳವಡಿಸಿಕೊಳ್ಳಬಹುದು.
2. ನಮ್ಮ ಮುಂದಿರುವ ಮಹತ್ತ್ವದ ವಿಷಯಗಳಲ್ಲಿ ಶಿಕ್ಷಣಕ್ಕಿಂತ ಪ್ರಧಾನವಾಗಿ ನಮ್ಮಗಮನವನ್ನು ಸೆಳೆಯಬಲ್ಲ ಮತ್ತೊಂದು ಇರಲಾರದು. ಭಗವಂತನ ಕೃಪೆಯ ಭಾಗವಾಗಿ ಭಾರತವು ಇಂಗ್ಲೆಂಡಿನೊಡನೆ ಸಂಪರ್ಕ ಹೊಂದಿದ ಕಾರಣದಿಂದ ಅದಕ್ಕೆ ಅಪಾರವಾದ ನೈತಿಕ ಹಾಗೂ ಐಹಿಕ ಅನುಗ್ರಹವು ಪ್ರಾಪ್ತವಾಗಿದೆ. ಅದರ ಅಂಗವಾಗಿ ಉಪಯುಕ್ತಜ್ಞಾನದ ಪ್ರಸರಣವನ್ನು ಭಾರತೀಯ ದೇಶವಾಸಿಗಳಿಗೆ ದಯಪಾಲಿಸುವ ಸಾಧನಗಳಾಗುವುದು ನಮ್ಮಅತ್ಯಂತ ಪವಿತ್ರ ಕರ್ತವ್ಯಗಳಲ್ಲಿ ಒಂದಾಗಿದೆ. ಭಾರತೀಯ ದೇಶವಾಸಿಗಳಲ್ಲಿ ಯುಗಯುಗಗಳಿಂದ ಅನೈತಿಕ ಆಚರಣೆಗಳು ಹಾಗೂ ಪರಮನೀಚ ಅಪರಾಧಗಳು ಚಾಲ್ತಿಯಲ್ಲಿದ್ದವು. ಈಗಾಗಲೇ ಅನೇಕ ದೃಷ್ಟಾಂತಗಳಲ್ಲಿ ಬ್ರಿಟಿಷರು ತಮ್ಮ ಪ್ರಭಾವವನ್ನು ಅಧಿಕ ಬಲಯುತವಾಗಿ ಹಾಗೂ ಯಶಸ್ವಿಯಾಗಿ ಪ್ರಯೋಗಿಸಿ ಅವನ್ನು ಮೂಲೋತ್ಪಾಟನೆ ಮಾಡಲು ಪ್ರಯತ್ನಿಸಿದ್ದಾರೆ. ಆದರೂ ಕೂಡ ಅಂಥ ಪ್ರಯತ್ನಗಳ ಸತ್ಫಲಗಳು ಶಾಶ್ವತವಾಗಬೇಕಾದರೆ ದೇಶವಾಸಿಗಳೆಲ್ಲರೂ ಮನಃಪೂರ್ವಕವಾಗಿ ಸಮ್ಮತಿಸಬೇಕಾಗುತ್ತದೆ. ಈ ಕಾರ್ಯವನ್ನು ಶೈಕ್ಷಣಿಕ ಪ್ರಗತಿಯಿಂದ ಮಾತ್ರವೇ ಸಾಧಿಸಬಹುದು.
3. ಮಿಗಿಲಾಗಿ ನಾವು ಯಾವಾಗಲೂ ಶೈಕ್ಷಣಿಕ ಪ್ರೋತ್ಸಾಹಕ್ಕೆ ವಿಶೇಷವಾದ ಮಹತ್ವಕೊಟ್ಟಿದ್ದೇವೆ. ಏಕೆಂದರೆ, ಇಂಡಿಯಾದಲ್ಲಿ ``ಕೇವಲ ಒಂದು ಉನ್ನತಮಟ್ಟದ ಬೌದ್ಧಿಕ ಸಾಮರ್ಥ್ಯವನ್ನು ಹುಟ್ಟಿಸುವುದಷ್ಟೇ ನಮ್ಮ ಗುರಿ ಅಲ್ಲ, ಅದರ ಪ್ರಯೋಜನವನ್ನು ಪಡೆಯುವವರ ನೈತಿಕ ಚಾರಿತ್ರ್ಯವನ್ನೂ ಕೂಡ ಅದು ಬೆಳೆಸುತ್ತದೆ. ಅಷ್ಟೇ ಅಲ್ಲ, ಇಂಡಿಯಾದಲ್ಲಿ ನೀವು ಹೆಚ್ಚೆಚ್ಚು ವಿಶ್ವಾಸವಿಟ್ಟು ನಿಮ್ಮ ಆಯಕಟ್ಟಿನ ಕಛೇರಿಗಳಿಗೆ ನೇಮಿಸಿಕೊಳ್ಳಬಹುದಾದ ನಂಬಿಕಸ್ಥ ಸೇವಕರನ್ನು ಕೂಡ ಒದಗಿಸುತ್ತದೆ.'' ಅದರಲ್ಲೂ ಇಂಡಿಯಾದೊಳಗೆ ಜನರ ಯೋಗಕ್ಷೇಮವು ಸರ್ಕಾರದ ಎಲ್ಲ ಬಗೆಯ ಕಚೇರಿಗಳ ಎಲ್ಲ ಪ್ರಕಾರದ

ಅಧಿಕಾರಿಗಳ ಪ್ರಾಮಾಣಿಕತೆ ಮತ್ತು ಸಾಮರ್ಥ್ಯವನ್ನು ನಿಕಟವಾಗಿ ಅವಲಂಬಿಸಿದೆ.

4. ಇಂಡಿಯಾದಲ್ಲಿ ಶೈಕ್ಷಣಿಕ ಪ್ರಗತಿಯ ಕುರಿತ ನಮ್ಮ ಪರಿಶ್ರಮಕ್ಕೆ ಯಶಸ್ಸು ಸಿಗಬೇಕೆಂಬುದು ಇಂಗ್ಲೆಂಡಿನ ತೀವ್ರ ಕಾಳಜಿಯಾಗಿರುವುದು ಅದರ ಚಾರಿತ್ರ್ಯಕ್ಕೆ ಸಹಜವಾಗಿದೆ. ಹಾಗಂತ ಇಂಡಿಯಾದಲ್ಲಿ ಐರೋಪ್ಯ ಜ್ಞಾನದ ಬೆಳವಣಿಗೆಯಾದರೆ ಅದರಿಂದ ಇಂಗ್ಲೆಂಡಿನ ಲೌಕಿಕ ಆಸಕ್ತಿಗಳ ಮೇಲೆ ಒಟ್ಟಾರೆಯಾಗಿ ಯಾವುದೇ ಪರಿಣಾಮವೂ ಆಗುವುದಿಲ್ಲ ಎಂದು ತಿಳಿಯಬೇಕಿಲ್ಲ. ಈ ಜ್ಞಾನವು ಇಂಡಿಯಾದ ದೇಶವಾಸಿಗಳಿಗೆ ಶ್ರಮ ಮತ್ತು ಬಂಡವಾಳದ ತೊಡಗುವಿಕೆಯಲ್ಲಿನ ಅದ್ಭುತ ಫಲಿತಾಂಶಗಳ ಕುರಿತು ಅರಿವು ಮೂಡಿಸುತ್ತದೆ, ತಮ್ಮ ದೇಶದ ಅಪಾರವಾದ ಮೂಲಸೌಕರ್ಯಗಳನ್ನು ಅಭಿವೃದ್ಧಿಪಡಿಸುವಲ್ಲಿ ನಮ್ಮನ್ನು ಅನುಕರಿಸುವಂತೆ ಹುರಿದುಂಬಿಸುತ್ತದೆ, ಅವರ ಪ್ರಯತ್ನಗಳಲ್ಲಿ ಮಾರ್ಗದರ್ಶನ ಮಾಡುತ್ತದೆ. ನಿಧಾನವಾದರೂ ಸಂಪತ್ತು ಮತ್ತು ವಾಣಿಜ್ಯದ ಆರೋಗ್ಯಪೂರ್ಣ ಬೆಳವಣಿಗೆಯಿಂದ ಸಿಗಬಹುದಾದಎಲ್ಲ ಅನುಕೂಲಗಳನ್ನು ಅವರಿಗೆ ದಯಪಾಲಿಸುತ್ತದೆ ಎಂಬುದಂತೂ ನಿಶ್ಚಿತ. ಅದೇ ಸಮಯದಲ್ಲಿ, ನಮ್ಮ ಜನಸಮುದಾಯದ ಎಲ್ಲ ವರ್ಗಗಳವರು ವ್ಯಾಪಕವಾಗಿ ಬಳಸುವ ಹಾಗೂ ನಮ್ಮ ತಯಾರಕರಿಗೆ ಅಗತ್ಯವಾದ ಅನೇಕ ವಸ್ತುಗಳ ಅಪಾರವಾದ ಮತ್ತು ಹೆಚ್ಚು ಖಚಿತವಾದ ಸರಬರಾಜನ್ನು ಖಾತ್ರಿಪಡಿಸುತ್ತದೆ. ಅಷ್ಟೇ ಅಲ್ಲದೆ ಬ್ರಿಟಿಷ್ ಶ್ರಮಿಕರ ಉತ್ಪನ್ನಗಳಿಗೆ ಬಹುತೇಕ ಎಂದೂ ಮುಗಿಯದ ಬೇಡಿಕೆಯನ್ನು ಸೃಷ್ಟಿಸುತ್ತದೆ.

5. ಶಿಕ್ಷಣದ ಪ್ರಸಾರಕ್ಕಾಗಿ ಇಲ್ಲಿಯವರೆಗೆ ಮಾಡಲಾದ ಪ್ರಯತ್ನಗಳನ್ನು ನಾವು ಕಾಲದಿಂದ ಕಾಲಕ್ಕೆ ಜಾಗರೂಕತೆಯಿಂದ ಗಮನಿಸಿ ಪ್ರೋತ್ಸಾಹಿಸುತ್ತಲೇ ಬಂದಿದ್ದೇವೆ, ಮತ್ತು ಆ ಪ್ರಯತ್ನಗಳನ್ನು ನಿರ್ದೇಶಿಸಿದ ವಿವಿಧ ವ್ಯವಸ್ಥೆಗಳ ಪ್ರಾಯೋಗಿಕ ಫಲಿತಾಂಶಗಳನ್ನು ನಾವು ತೀವ್ರ ಆಸಕ್ತಿಯಿಂದ ಗಮನಿಸಿದ್ದೇವೆ. ಶಿಕ್ಷಣದ ವಿವಿಧ ಮಂಡಲಿಗಳು ಮತ್ತು ಪರಿಷತ್ತುಗಳ ನಿಯತಕಾಲಿಕ ವರದಿಗಳು ಹಾಗೂ ಅದೇ ವಿಷಯವನ್ನುಕುರಿತ ಇತರ ಕಛೇರಿ ವಾರ್ತೆಗಳನ್ನು ಓದುತ್ತಿದ್ದೇವೆ. ಈ ಮೂಲಕ ಸರ್ಕಾರದ ನೇರ ನಿಯಂತ್ರಣದಲ್ಲಿರುವ ಶೈಕ್ಷಣಿಕ ಸಂಸ್ಥೆಗಳನ್ನು ಕುರಿತ ಸಂಪೂರ್ಣ ಮಾಹಿತಿಯುನಮ್ಮ ಸುಪರ್ದಿನಲ್ಲಿದೆ. ಅದೇ ರೀತಿ ಇಂಡಿಯಾದ ವಿದ್ಯಮಾನಗಳನ್ನು ಕುರಿತು ಸಂಸತ್ತಿನ ಉಭಯ ಸದನಗಳ ಸಮಿತಿಗಳ ಮುಂದೆ ತೆಗೆದುಕೊಳ್ಳಲಾದ ಸಾಕ್ಷ್ಯಾಧಾರಗಳು ಕೂಡ ನಮಗೆ ಲಭ್ಯವಿವೆ. ಅವು ಸರ್ಕಾರಕ್ಕೆ ಸಂಬಂಧವಿಲ್ಲದ ವ್ಯಕ್ತಿಗಳು ಈ ಉದ್ದೇಶಕ್ಕಾಗಿ ಮಾಡಿದ ಪರಿಶ್ರಮಕ್ಕೆ ಸಂಬಂಧಪಟ್ಟಂತೆ ಮಾಹಿತಿಯನ್ನು ಒದಗಿಸಿಕೊಟ್ಟಿವೆ. ಶಿಕ್ಷಣದ ಪ್ರಶ್ನೆಯನ್ನು ಕುರಿತು ಬಹುಮಟ್ಟಿಗೆ ಒಂದು ದೃಢವಾದ ನಿರ್ಣಯಕ್ಕೆ ಬರಲು ಅತ್ಯಂತ ಸಮರ್ಥರಾದವರ ಅಭಿಪ್ರಾಯಗಳನ್ನು ಇಂಥ ಸಾಕ್ಷ್ಯಾಧಾರಗಳು ತಿಳಿಸುತ್ತವೆ. ಆ ಮೂಲಕ ಅಂಥ ಜ್ಞಾನದ ಲಾಭವನ್ನು ಪಡೆಯಲು ನಮಗೆ ಸಾಮರ್ಥ್ಯ ನೀಡಿವೆ.

6. ಆದ್ದರಿಂದ ನಾವು ಭೂತಕಾಲದ ಸಮೃದ್ಧ ಅನುಭವ ಮತ್ತು ಭವಿಷ್ಯಕ್ಕೆ ಬೇಕಾದ ಅತ್ಯಂತ ಸಮರ್ಥವಾದ ಸಲಹೆಗಳಿಂದ ಸುಸಜ್ಜಿತರಾಗಿದ್ದೇವೆ. ಹಾಗೂ ಇಂಡಿಯಾದಲ್ಲಿ ಸಾಮಾನ್ಯ ಶಿಕ್ಷಣವನ್ನು ವ್ಯವಸ್ಥಿತವಾಗಿ ಮತ್ತು ಹೆಚ್ಚು ವಿಸ್ತೃತವಾಗಿ ಪ್ರೋತ್ಸಾಹಿಸಲು ಸರ್ಕಾರದ ನೆರವನ್ನು ಪಡೆದುಕೊಳ್ಳುವುದು ಹೇಗೆ

ಮತ್ತು ಈ ನಿಟ್ಟಿನಲ್ಲಿ ಅಳವಡಿಸಿಕೊಳ್ಳಬೇಕಾದ ಕ್ರಮಗಳೇನು ಎನ್ನುವುದನ್ನು ನಿರ್ಧರಿಸುವ ಸ್ಥಾನದಲ್ಲಿ ಈಗ ಇದ್ದೇವೆ.

7. ಇನ್ನಷ್ಟು ಮುಂದುವರಿಯುವ ಮುನ್ನ, ನಾವು ಒತ್ತಿ ಹೇಳಬೇಕಾದದ್ದು ಏನೆಂದರೆ, ಇಂಡಿಯಾದಲ್ಲಿ ನಾವು ವಿಸ್ತರಿಸಲು ಅಪೇಕ್ಷಿಸಿರುವ ಶಿಕ್ಷಣವು ಯೂರೋಪಿನ ಸುಧಾರಿಸಿದ ಕಲೆಗಳು, ವಿಜ್ಞಾನ, ತತ್ತ್ವಜ್ಞಾನ ಮತ್ತು ಸಾಹಿತ್ಯವನ್ನು ಪ್ರಸರಣ ಮಾಡುವ ಉದ್ದೇಶವನ್ನು ಹೊಂದಿರತಕ್ಕದ್ದು; ಸಂಕ್ಷಿಪ್ತವಾಗಿ ಹೇಳುವುದಾದರೆ ಅದು ಐರೋಪ್ಯ ಜ್ಞಾನವಾಗಿರಬೇಕು.

8. ಪೌರಸ್ತ್ಯ ದೇಶಗಳ ಕಲಿಕೆಯ ಭಾಗವಾಗಿರುವ ವಿಜ್ಞಾನ ಮತ್ತು ತತ್ತ್ವಜ್ಞಾನದ ಪದ್ಧತಿಗಳು ಗುರುತರವಾದ ತಪ್ಪುಗಳಿಂದ ತುಂಬಿ ತುಳುಕುತ್ತಿವೆ ಮತ್ತು ಪೌರಸ್ತ್ಯ ಸಾಹಿತ್ಯವು ಎಲ್ಲ ಆಧುನಿಕ ಸಂಶೋಧನೆಗಳು ಹಾಗೂ ಸುಧಾರಣೆಗಳಿಗೆ ಸಂಬಂಧಿಸಿದಂತೆ ಅತ್ಯಂತ ಕಳಪೆಯಾಗಿದೆ. ಆದ್ದರಿಂದ ಏಷ್ಯಾದ ಕಲಿಕೆಯು ಎಷ್ಟೇ ವ್ಯಾಪಕವಾಗಿ ಹರಡಿಕೊಂಡಿದ್ದರೂ, ಅದು ನಮ್ಮ ಉದ್ದೇಶವನ್ನು ಈಡೇರಿಸುವ ಸಾಧ್ಯತೆಯು ಅಲ್ಪವಾಗಿದೆ. ಇಂಡಿಯಾದ ಶಾಸ್ತ್ರೀಯ ಭಾಷೆಗಳೆಂದು ಕರೆಯಬಹುದಾದ ಭಾಷೆಗಳ ಅಭಿವೃದ್ಧಿಗೆ ಅಥವಾ ಸಂಸ್ಕೃತ, ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳ ಅಧ್ಯಯನಕ್ಕೆ ಅವಕಾಶವನ್ನು ಒದಗಿಸುತ್ತಿರುವ ಸಂಸ್ಥೆಗಳ ಭವಿಷ್ಯವನ್ನುನಾವು ಕುಗ್ಗಿಸಲು ಬಯಸುವುದಿಲ್ಲ. ಆ ಭಾಷೆಗಳಲ್ಲಿರುವ ಕೃತಿಗಳ ಪರಿಚಯವು ಐತಿಹಾಸಿಕ ಮತ್ತು ಪುರಾತತ್ವವಸ್ತು ಶೋಧನೆಯ ದೃಷ್ಟಿಯಿಂದ ಮೌಲಿಕವಾದದ್ದು. ಹಿಂದೂ ಮತ್ತು ಮಹಮದೀಯ ಕಾನೂನಿನ ಅಧ್ಯಯನಕ್ಕೆ ಈ ಭಾಷೆಗಳ ಅರಿವು ಅಗತ್ಯ, ಮತ್ತು ಇಂಡಿಯಾದ ದೇಶೀಯ ಭಾಷೆಗಳ ವಿಮರ್ಶಾತ್ಮಕ ಬೆಳವಣಿಗೆ ಮತ್ತು ಸುಧಾರಣೆಗೆ ಕೂಡ ಇದು ಬಹಳ ಮುಖ್ಯವಾದದ್ದು.

9. ಹೆಚ್ಚು ಸರಿಯಾದ ನೈತಿಕತೆ ಮತ್ತು ಮುಂದುವರಿದ ವಿಜ್ಞಾನಗಳನ್ನು ಭಾರತೀಯ ತತ್ವಜ್ಞಾನದ ಭಾಗಗಳಿಗೆ ಕಸಿಮಾಡಲು ಶ್ಲಾಘನೀಯ ಪ್ರಯತ್ನಗಳನ್ನು ನಡೆಸಿ ಗೆದ್ದ ಅನೇಕ ಪ್ರಖ್ಯಾತ ಪೌರ್ವಾತ್ಯ ವಿದ್ವಾಂಸರ ಕುರಿತು ನಾವು ಅಜ್ಞಾನಿಗಳೇನಲ್ಲ. ಬದಲಾಗಿ ಇಂಡಿಯಾದ ಸುಶಿಕ್ಷಿತ ವರ್ಗದ ಮೇಲೆ ಅವರು ಬೀರಿದ ಸತ್ಪರಿಣಾಮಗಳನ್ನು ವಿಶೇಷವಾಗಿ ಗುರುತಿಸುತ್ತೇವೆ. ಸುಶಿಕ್ಷಿತ ವರ್ಗದವರು ಪ್ರಾಚೀನ ಭಾಷೆಗಳಿಗೆ ಪಾರಂಪರಿಕವಾದ ಗೌರವವನ್ನು ಸಲ್ಲಿಸುತ್ತಾರೆ. ತಮ್ಮ ದೇಶವಾಸಿಗಳಲ್ಲಿ ಇಂಥ ಸುಶಿಕ್ಷಿತರು ಪಡೆದುಕೊಂಡಿರುವ ಗೌರವಯುತವಾದ ಹಾಗೂ ಪ್ರಭಾವಶಾಲಿಯಾದ ಸ್ಥಾನಮಾನದಕಾರಣದಿಂದ ಶಿಕ್ಷಣದ ಪ್ರಸಾರದಲ್ಲಿಅವರ ನೆರವು ಬಹಳ ಅಮೂಲ್ಯವಾದುದು. ಆದರೂ ಇಂಥ ಪ್ರಯತ್ನಗಳು ಎಷ್ಟೇ ಅನುಕೂಲಕರವಾಗಿದ್ದರೂ ಅಂತಹ ಪ್ರಯತ್ನಗಳು ನಮಗೆ ಕೇವಲ ಪೂರಕವಾಗಿದ್ದು ಇಂಡಿಯಾದ ಶಿಕ್ಷಣದ ಯಾವುದೇ ಸಾಮಾನ್ಯ ಯೋಜನೆಗಳಿಗೆ ಸ್ವತಂತ್ರ ಅಸ್ತಿಭಾರವನ್ನು ಹಾಕುವ ಸಾಮರ್ಥ್ಯವನ್ನು ಅವು ಹೊಂದಿಲ್ಲ.

10. ಇತ್ತೀಚಿನ ವರ್ಷಗಳಲ್ಲಿ ಇಂಡಿಯಾದ ಕೆಲವು ದೇಶವಾಸಿಗಳು ಇಂಗ್ಲಿಷ್ ಸಾಹಿತ್ಯ ಮತ್ತು ಐರೋಪ್ಯ ವಿಜ್ಞಾನದಲ್ಲಿ ಉನ್ನತ ಸಾಧನೆಯನ್ನು ಗಳಿಸಿಕೊಂಡಿದ್ದಾರೆ ಎನ್ನುವುದಕ್ಕೆ ಅತ್ಯಂತ ತೃಪ್ತಿಕರವಾದ ಸಾಕ್ಷ್ಯಗಳೂ ನಮಗೆ ದೊರೆತಿವೆ. ಆದರೆ ಈ ಯಶಸ್ಸುಒಂದು ಸಣ್ಣ ಗುಂಪಿನ ಜನರಿಗಷ್ಟೇ ಸೀಮಿತವಾಗಿದೆ. ಆದರೆ ಅಷ್ಟೊಂದು ಉನ್ನತವಲ್ಲದ ಸಾಮಾನ್ಯ ಐರೋಪ್ಯ ಜ್ಞಾನವನ್ನು ಗಳಿಸುವ

ವಿಧಾನವನ್ನುಇನ್ನೂ ವ್ಯಾಪಕವಾಗಿ ವಿಸ್ತರಿಸುವ ಅಪೇಕ್ಷೆಯನ್ನು ನಾವು ಹೊಂದಿದ್ದೇವೆ. ಏಕೆಂದರೆ, ಅಂಥಜ್ಞಾನವು ಇಂಡಿಯಾದ ಜನರಿಗೆತಮ್ಮ ಜೀವನದ ವಿವಿಧ ಕ್ಷೇತ್ರಗಳಲ್ಲಿ ಪ್ರಾಯೋಗಿಕವಾಗಿ ಉಪಯುಕ್ತವಾಗುತ್ತದೆ ನಾವು ಮೇಲೆ ಹೇಳಿದ ಕಾರಣಗಳಿಂದ, ಈ ಗುರಿಯನ್ನು ಸಾಧಿಸಲು ಅಗತ್ಯವಾದುದೇನೆಂದರೆ ಐರೋಪ್ಯ ಲೇಖಕರ ಕೃತಿಗಳನ್ನು ಅವರಿಗೆ ಪರಿಚಯಿಸಬೇಕು. ಅವರಿಗೆ ಕಲಿಸುವ ಎಲ್ಲ ವಿಷಯಗಳ ಮೇಲೂ ಐರೋಪ್ಯ ಚಿಂತನೆ ಮತ್ತು ಪರಿಶ್ರಮಗಳ ಫಲವಾದ ಜ್ಞಾನವನ್ನು ಅವರಿಗೆ ನೀಡಬೇಕು; ಮತ್ತು ಯಾವುದೇ ಸಾಮಾನ್ಯ ಶಿಕ್ಷಣ ವ್ಯವಸ್ಥೆಯ ಉದ್ದೇಶವೂ ಕೂಡ ಈ ಪ್ರಕಾರದ ಜ್ಞಾನವನ್ನು ಹಂಚುವ ಸಾಧನದ ವಿಸ್ತರಣೆಯೇ ಆಗಿರಬೇಕು.

11. ನಮ್ಮ ಉದ್ದೇಶವು ಈಡೇರಬೇಕಾದ ವಿಧಾನ ಯಾವುದು ಎನ್ನುವುದು ಮುಂದೆ ನಾವು ಪರಿಗಣಿಸಬೇಕಾದ ಸಂಗತಿಯಾಗಿದೆ. ಇದು ಇಂಡಿಯಾದ ಜನರಿಗೆ ಯಾವ ಮಾಧ್ಯಮದ ಮೂಲಕ ಜ್ಞಾನವನ್ನು ರವಾನಿಸಬೇಕು ಎಂಬ ಪ್ರಶ್ನೆಯ ಕಡೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಇಂಡಿಯಾದ ದೇಶ ಭಾಷೆಗಳಲ್ಲಿ ಐರೋಪ್ಯ ಕೃತಿಗಳ ಅನುವಾದಗಳ ಅಥವಾ ಅಳವಡಿಕೆಗಳ ಕೊರತೆಯಿದೆ. ಮತ್ತು ಪೌರಸ್ತ್ಯ ದೇಶಗಳ ಪಾಂಡಿತ್ಯ ಪೂರ್ಣ ಭಾಷೆಗಳಲ್ಲಿ ಐರೋಪ್ಯ ಜ್ಞಾನವು ತೀರ ಅಪರಿಪೂರ್ಣವಾದ ಆಕಾರದಲ್ಲಿ ಇದೆ. ಈ ಕಾರಣದಿಂದಾಗಿ ಮುಕ್ತ ಶಿಕ್ಷಣವನ್ನು ಪಡೆಯಲು ಬಯಸುವವರು ಐರೋಪ್ಯ ಸಾಹಿತ್ಯವನ್ನು ಅಧ್ಯಯನ ಮಾಡಲು ಇಂಗ್ಲಿಷ್ ಭಾಷೆಯಲ್ಲಿ ಪಾಂಡಿತ್ಯವನ್ನು ಗಳಿಸುವುದು ಇಲ್ಲಿಯವರೆಗೂ ಅತ್ಯಗತ್ಯವಾಗಿತ್ತು ಈ ರೀತಿಉನ್ನತ ಶಿಕ್ಷಣವನ್ನು ಗಳಿಸಲು ಆಕಾಂಕ್ಷಿಗಳಾದ ಇಂಡಿಯಾದ ಮೂಲನಿವಾಸಿಗಳಿಗೆ ಇಂಗ್ಲಿಷ್ ಜ್ಞಾನವು ಸದಾ ಅನಿವಾರ್ಯವಾಗಿತ್ತು.

12. ಇಂಡಿಯಾದ ಕೆಲವು ಭಾಗಗಳಲ್ಲಿ, ವಿಶೇಷವಾಗಿ ಪ್ರೆಸಿಡೆನ್ಸಿ (ಪ್ರಾಂತ್ಯ) ಪಟ್ಟಣಗಳ ಸುತ್ತಮುತ್ತ ಅನೇಕ ಸಾರ್ವಜನಿಕ ಹಾಗೂ ಖಾಸಗಿ ಉದ್ಯೋಗಗಳಿಗೆ ಇಂಗ್ಲಿಷ್ ಭಾಷಾ ಜ್ಞಾನವಿರುವವರನ್ನು ಖಾಯಿಷ್ ಮಾಡಲಾಗುತ್ತಿತ್ತು. ಈ ಕಾರಣದಿಂದ ಶಾಲಾ ಶಿಕ್ಷಣದಲ್ಲಿ ಪಾಲ್ಗೊಳ್ಳುವವರ ಗುರಿ ಮತ್ತು ಉದ್ದೇಶವು ಇಂಗ್ಲಿಷ್ ಭಾಷೆಯಲ್ಲಿ ಸಾಧಾರಣ ಮಟ್ಟದ ಪ್ರಾವೀಣ್ಯವನ್ನು ಗಳಿಸುವುದಾಗಿತ್ತೇ ವಿನಾ ತಮ್ಮ ಲೋಕಜ್ಞಾನವನ್ನು ಸುಧಾರಿಸಿಕೊಳ್ಳಲು ಅದು ಅಗತ್ಯವಾದ ಮೊದಲನೆಯ ಮೆಟ್ಟಿಲು ಎಂದು ಪರಿಗಣಿಸಲಾಗುತ್ತಿರಲಿಲ್ಲ. ಇಂಗ್ಲಿಷನ್ನು ಕೇವಲ ಮಾತನಾಡುವ ಮತ್ತು ಬರೆಯುವ ಸಾಮರ್ಥ್ಯವು ಅನೇಕ ರೀತಿಗಳಲ್ಲಿ ಮೌಲಿಕವಾದುದು ಎಂಬುದನ್ನು ನಾವು ಅಲ್ಲಗಳೆಯುವುದಿಲ್ಲ. ಆದರೆ ಈ ಜಿಲ್ಲೆಗಳಲ್ಲಿ ದೇಶಭಾಷೆಗಳ ಅಧ್ಯಯನವನ್ನು ಅನುಚಿತವಾಗಿ ನಿರ್ಲಕ್ಷಿಸುವ ಪ್ರವೃತ್ತಿಯು ಹುಟ್ಟಿಕೊಂಡಿದೆ ಎಂದು ನಮಗೆ ಆತಂಕವಾಗಿದೆ.

13. ದೇಶೀಯ ಭಾಷೆಗಳಿಗೆ ಬದಲಾಗಿ ಇಂಗ್ಲಿಷ್ ಭಾಷೆಯನ್ನು ಸ್ಥಾಪಿಸುವುದು ನಮ್ಮ ಗುರಿಯಾಗಲಿ ಅಪೇಕ್ಷೆಯಾಗಲಿ ಅಲ್ಲ. ಬೃಹತ್ ಜನ ಸಮುದಾಯವು ಅರ್ಥಮಾಡಿಕೊಳ್ಳುವ ಭಾಷೆಗಳ ಬಳಕೆಗೆ ಮಾತ್ರ ಪ್ರಾಮುಖ್ಯವನ್ನು ಕೊಡಬೇಕೆಂಬ ವಿಷಯದಲ್ಲಿ ನಾವು ಯಾವಾಗಲೂ ವಿವೇಚನಾವಂತರಾಗಿದ್ದೇವೆ. ನ್ಯಾಯ ತೀರ್ಮಾನಗಳಲ್ಲಿ ಮತ್ತು ಸರ್ಕಾರದ ಅಧಿಕಾರಿಗಳು ಹಾಗೂ ಜನರ ನಡುವಣ ಸಂಪರ್ಕಗಳಲ್ಲಿ ಈ ಭಾಷೆಗಳನ್ನು ಮಾತ್ರ ಪರ್ಷಿಯನ್ ಸ್ಥಾನದಲ್ಲಿ ನಾವು ಇರಿಸಿದ್ದೇವೆಯೇ ವಿನಃ ಇಂಗ್ಲಿಷ್ ಅನ್ನು ಅಲ್ಲ. ಆದ್ದರಿಂದ ಸಾಮಾನ್ಯ

ಶಿಕ್ಷಣದ ವ್ಯವಸ್ಥೆಯಲ್ಲಿ ಅವುಗಳ ಅಧ್ಯಯನವನ್ನು ತತ್ಪರತೆಯಿಂದ ನಡೆಸುವುದು ಅನಿವಾರ್ಯವಾಗಿದೆ. ಉನ್ನತ ಶಿಕ್ಷಣವನ್ನು ಪಡೆಯಲಾರದ ಪರಿಸ್ಥಿತಿಯಲ್ಲಿರುವ ಮತ್ತು ವಿದೇಶಿ ಭಾಷೆಯೊಂದರ ಕಷ್ಟಗಳನ್ನು ಮೀರಲಾಗದ ಅಪಾರ ಜನಸಮೂಹಕ್ಕೆ ಸುಧಾರಿತ ಐರೋಪ್ಯ ಜ್ಞಾನವನ್ನು ಪರಿಚಯಿಸಬೇಕೆಂದರೆ, ಒಂದಿಲ್ಲೊಂದು ದೇಶೀಯ ಭಾಷೆಯ ಮೂಲಕ ಮಾತ್ರವೇ ಸಂವಹನ ಮಾಡಬೇಕಾಗುತ್ತದೆ.

14. ಯಾವುದೇ ಸಾಮಾನ್ಯ ಶಿಕ್ಷಣ ವ್ಯವಸ್ಥೆಯಲ್ಲಿಇಂಗ್ಲಿಷ್ ಭಾಷೆಗೆ ಬೇಡಿಕೆ ಇದ್ದಲ್ಲಿಅದನ್ನು ಬೋಧಿಸಬೇಕು. ಆದರೆ ಅಂತಹ ಬೋಧನೆಯು ಜೊತೆಗೆ ಆ ಜಿಲ್ಲೆಯ ದೇಶೀಯ ಭಾಷೆಯ ಅಧ್ಯಯನವನ್ನು ಕೂಡ ಅತೀವ ಕಾಳಜಿಯಿಂದ ಸಂಯೋಜಿಸಬೇಕು. ಆಯಾ ಭಾಷೆಯಲ್ಲಿ ಸಂವಹಿಸಲು ಸಾಧ್ಯವಾಗುವಂಥ ಸಾಮಾನ್ಯ ಶಿಕ್ಷಣವನ್ನೇ ಆ ಭಾಷೆಯ ಮೂಲಕ ಸಂವಹನ ಮಾಡಬೇಕು. ಸಾಮಾನ್ಯ ಶಿಕ್ಷಣವನ್ನು ಇಂಗ್ಲಿಷ್ ಭಾಷೆಯ ಮೂಲಕ ಪಡೆಯಲು ಸಾಕಾಗುವಷ್ಟು ಜ್ಞಾನವನ್ನು ಗಳಿಸಿಕೊಂಡ ವ್ಯಕ್ತಿಗಳಿಗೆ ಶಿಕ್ಷಣದ ಅತ್ಯಂತ ಪರಿಪೂರ್ಣವಾದ ಮಾಧ್ಯಮವಾಗಿ ಇಂಗ್ಲಿಷ್ ಭಾಷೆಯ ಬಳಕೆಯ ಮೂಲಕ ಶಿಕ್ಷಣ ನೀಡುವುದು ಮುಂದುವರಿಯುತ್ತದೆ. ಇಂಗ್ಲಿಷ್ ತಿಳಿಯದ ಅಥವಾ ಅದನ್ನು ಸರಿಯಾಗಿ ಕಲಿಯದ ಬಹುಸಂಖ್ಯೆಯ ಜನರಿಗೆ ಬೋಧಿಸಲು ದೇಶೀಯ ಭಾಷೆಗಳನ್ನೇ ಉಪಯೋಗಿಸಬೇಕು. ಅರ್ಹ ಆಚಾರ್ಯರು ಮತ್ತು ಪ್ರಾಧ್ಯಾಪಕರ ಮೂಲಕ ಮಾತ್ರ ಇದನ್ನು ಪರಿಣಾಮಕಾರಿಯಾಗಿ ಮಾಡಬಹುದು. ಅವರು ಸ್ವತಃ ಇಂಗ್ಲಿಷ್ ಅನ್ನು ಕಲಿತಿರಬೇಕು. ಆ ಮೂಲಕ ಎಲ್ಲ ಪ್ರಕಾರದ ಜ್ಞಾನಗಳಲ್ಲಿ ನಡೆದಇತ್ತೀಚಿನ ಬೆಳವಣಿಗೆಗಳನ್ನು ಅವರು ಅರಿತಿರಲು ಸಾಧ್ಯವಾಗುತ್ತದೆ. ಹೀಗೆ ಅವರು ಗಳಿಸಿದ ಮಾಹಿತಿಯನ್ನುತಮ್ಮ ಸಹ ದೇಶವಾಸಿಗಳಿಗೆ ಅವರ ಮಾತೃಭಾಷೆಯ ಮಾಧ್ಯಮದ ಮೂಲಕವೇ ನೀಡುತ್ತಾರೆ. ಅದೇ ಸಮಯದಲ್ಲಿ, ದೇಶೀಯ ಭಾಷೆಗಳ ಮಹತ್ತ್ವವು ಹೆಚ್ಚೆಚ್ಚು ಅರಿವಿಗೆ ಬಂದಂತೆಲ್ಲ ಐರೋಪ್ಯ ಪುಸ್ತಕಗಳ ಅನುವಾದದಿಂದ ದೇಶೀಯ ಭಾಷೆಗಳ ಸಾಹಿತ್ಯವುಕ್ರಮೇಣ ಸಮೃದ್ಧವಾಗುತ್ತದೆ. ಇಲ್ಲವೆ ಐರೋಪ್ಯ ಪ್ರಗತಿಯ ಸ್ಫೂರ್ತಿಯಿಂದ ತುಂಬಿದ ಜನರು ಮೂಲ ಕೃತಿಗಳನ್ನೇ ರಚಿಸುತ್ತಾರೆ. ಈ ರೀತಿಯಲ್ಲಿ ಐರೋಪ್ಯ ಜ್ಞಾನವು ಕ್ರಮೇಣವಾಗಿ ಎಲ್ಲ ವರ್ಗದ ಜನರಿಗೆ ಎಟುಕುವಂತಾಗುತ್ತದೆ. ಆದ್ದರಿಂದ ನಾವು ಐರೋಪ್ಯ ಜ್ಞಾನವನ್ನು ಪ್ರಸರಣ ಮಾಡಲು ಇಂಗ್ಲಿಷ್‌ಭಾಷೆ ಮತ್ತು ಇಂಡಿಯಾದ ದೇಶಭಾಷೆಗಳನ್ನು ಒಟ್ಟಾರೆಯಾಗಿ ಒಂದು ಮಾಧ್ಯಮವಾಗಿ ಗುರುತಿಸುತ್ತೇವೆ. ಇಂಡಿಯಾದಲ್ಲಿ ಅರ್ಹ ಶಾಲಾ ಮಾಸ್ತರುಗಳನ್ನು ನೇಮಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ ಸಾಕಷ್ಟು ಉನ್ನತ ದರ್ಜೆಯ ಎಲ್ಲ ಶಾಲೆಗಳಲ್ಲಿಯೂ ಅವುಗಳನ್ನು ಒಟ್ಟಿಗೆ ಬೆಳೆಸುವುದು ನಮ್ಮ ಅಪೇಕ್ಷೆ.

15. ಈಗ ನಾವು ಶಿಕ್ಷಣದ ಮೇಲ್ವಿಚಾರಣೆ ಮತ್ತು ನಿರ್ದೇಶನಕ್ಕಾಗಿ ಸ್ಥಾಪಿಸಲು ಉದ್ದೇಶಿಸಿರುವ ಸಾಧನೋಪಾಯಗಳ ಕಡೆಗೆ ಸಾಗುತ್ತೇವೆ. ಇಲ್ಲಿಯವರೆಗೆ ಇದು ನಮ್ಮ ಬೆಂಗಾಲ್, ಮದ್ರಾಸ್ ಮತ್ತು ಬಾಂಬೆ ಪ್ರಾಂತ್ಯಗಳಲ್ಲಿ ಶಿಕ್ಷಣ ಮಂಡಲಿಗಳು ಮತ್ತು ಕೌನ್ಸಿಲ್‌ಗಳಿಂದ ನಡೆಯುತ್ತಿದೆ. ಅದರಲ್ಲಿ ಐರೋಪ್ಯ ಮತ್ತು ದೇಶೀಯ ಸಜ್ಜನರು ಇದ್ದಾರೆ. ಅವರು ಯಾವ ಸಂಭಾವನೆಯೂ ಇಲ್ಲದೆ ಈ ಕರ್ತವ್ಯಕ್ಕೆ ತಮ್ಮನ್ನು ಮುಡಿಪಾಗಿಟ್ಟಿದ್ದಾರೆ. ಕೇವಲ ಕಲಿಕೆ ಮತ್ತು ನಾಗರಿಕತೆಯ ಪ್ರಗತಿಗೆ ನೆರವಾಗಬೇಕೆಂಬ ಪ್ರಜ್ಞೆಯಿಂದ, ಹಾಗೂ ಶ್ರದ್ಧೆ ಮತ್ತು ಸಾಮರ್ಥ್ಯದಿಂದ ಅವರು

ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅದಕ್ಕಾಗಿ ಇಂಡಿಯಾದ ಜನರ ಕೃತಜ್ಞತೆಗೆ ಅವರು ಪಾತ್ರರಾಗಲೇಬೇಕು. ಅದರಲ್ಲಿ ಕೆಲವು ಗೌರವಾನ್ವಿತ ಹೆಸರುಗಳು ಇಂಡಿಯಾಕ್ಕೆ ಮತ್ತು ಮಾನವ ಜನಾಂಗಕ್ಕೆ ಉಪಕಾರಮಾಡಿದವರಲ್ಲಿ ಅಗ್ರ ಸ್ಥಾನದಲ್ಲಿ ನಿಲ್ಲುತ್ತವೆ.

16. ಬೆಂಗಾಲ್ ನಿಂದ ವಾಯವ್ಯ ಪ್ರದೇಶಗಳ ಶಿಕ್ಷಣ ಸಂಸ್ಥೆಗಳನ್ನು ಪ್ರತ್ಯೇಕಿಸಿದ ಅನಂತರ ಆಗ್ರಾದ ಲೆಫ್ಟಿನೆಂಟ್ ಗವರ್ನರ್ ಅವುಗಳ ನಿರ್ವಹಣೆಯ ಕಾರ್ಯವನ್ನು ತಾವೇ ಕೈಗೆತ್ತಿಕೊಂಡರು; ಈ ಸಂದರ್ಭದಲ್ಲಿ ಅವರ ಬಗ್ಗೆ ನಮ್ಮ ಅಭಿಪ್ರಾಯವನ್ನು ದಾಖಲಿಸದೇ ಮುಂದೆ ಹೋಗುವುದು ಸಾಧ್ಯವೇ ಇಲ್ಲ. ಮಿ. ಥಾಮ್ಸನ್ ಅವರು ತಮ್ಮ ಆಡಳಿತದ ಇತರ ಎಲ್ಲ ಶಾಖೆಗಳಲ್ಲಿ ಹೇಗೋ ಹಾಗೆಯೇ ತಮ್ಮ ಅಧೀನಕ್ಕೇ ಬಂದ ಜನರ ಪರಿಸ್ಥಿತಿ ಮತ್ತು ಅಗತ್ಯಗಳಿಗೆ ಸಂಬಂಧಿಸಿದಂತೆ ಕರಾರುವಾಕ್ಕಾದ ತಿಳಿವಳಿಕೆಯನ್ನು ಪ್ರದರ್ಶಿಸಿದರು. ಅವರ ಕ್ಷೇಮಾಭಿವೃದ್ಧಿಗೆ ಅತ್ಯುತ್ತಮವಾಗಿ ಸರಿಹೊಂದುವ ರಾಜಕೀಯ ಕ್ರಮಗಳ ಸ್ಪಷ್ಟವಾದ ಮತ್ತು ಸಿದ್ಧವಾದ ಗ್ರಹಿಕೆ ಅವರಿಗಿತ್ತು. ಅವರ ಮರಣವು ಇಂಡಿಯಾಕ್ಕೆ ಒಂದು ದೊಡ್ಡ ನಷ್ಟ. ಅವರ ಅವಿಚ್ಛಿನ್ನವಾದ ಪರಿಶ್ರಮವು ಅವರ ಉಪಯುಕ್ತ ಸೇವಾವಧಿಯನ್ನು ಕುಗ್ಗಿಸಿತೇನೋ ಎಂಬ ಆತಂಕ ನಮ್ಮದು. ಅದಕ್ಕೆ ನಾವು ಗಾಢವಾಗಿ ವಿಷಾದಿಸುತ್ತೇವೆ.

17. ಪ್ರಸ್ತುತ ಶೈಕ್ಷಣಿಕ ಮಂಡಲಿಗಳು ಮತ್ತು ಕೌನ್ಸಿಲ್‌ಗಳು ತಮ್ಮ ಕಾರ್ಯವನ್ನು ನಿರ್ವಹಿಸುತ್ತಿರುವ ರೀತಿಗೆ ನಮ್ಮ ಪ್ರಾಮಾಣಿಕವಾದ ವಂದನೆಗಳನ್ನು ಸಲ್ಲಿಸಲು ಬಯಸುತ್ತೇವೆ. ನಮ್ಮ ಪ್ರಸ್ತುತ ಯೋಜನೆಯ ಅತ್ಯಂತ ಮುಖ್ಯವಾದ ಭಾಗದ ಭವಿತವ್ಯಕ್ಕೆ ಈ ಸಂಸ್ಥೆಗಳಲ್ಲಿ ಸೇರಿರುವ ಸಜ್ಜನರ ನೆರವು ನಮಗೆ ದೊರೆಯುತ್ತದೆಎಂದು ಈಗಲೂ ನಾವು ಆಶಿಸುತ್ತಿದ್ದೇವೆ. ಆದರೆ ನಮ್ಮ ಪ್ರಯತ್ನಗಳ ಸಾಮಾನ್ಯ ವ್ಯಾಪ್ತಿಯನ್ನು ಬಹಳ ಗಣನೀಯವಾಗಿ ವಿಸ್ತರಿಸಬೇಕು ಎಂದು ನಾವು ನಿರ್ಧರಿಸಿದ್ದೇವೆ. ಆ ನಿಟ್ಟಿನಲ್ಲಿ ಈಗಾಗಲೇ ಸಂಪೂರ್ಣವಾಗಿ ಕಡೆಗಣಿಸಲ್ಪಟ್ಟ ವಿಭಿನ್ನ ಮಧ್ಯವರ್ತಿಗಳು ಹಾಗೂ ಸರ್ಕಾರವು ಸರಿಯಾಗಿ ಬಳಸಿಕೊಳ್ಳದ ಇತರರನ್ನು ಒಟ್ಟಿಗೇ ತೊಡಗಿಸಲಾಗುತ್ತದೆ. ಶಿಕ್ಷಣದ ಮೇಲುಸ್ತುವಾರಿಯನ್ನು ಹಾಗೂ ನಿರ್ದೇಶನವನ್ನು ಹೆಚ್ಚು ವ್ಯವಸ್ಥಿತ ನೆಲೆಗಟ್ಟಿನಲ್ಲಿ ರಚಿಸುವುದು ಕ್ಷೇಮ ಎನ್ನುವುದು ನಮ್ಮಅಭಿಪ್ರಾಯ. ಹಾಗಾಗಿ ನಾವು ಇಂಡಿಯಾದ ಹಲವಾರು ಪ್ರೆಸಿಡೆನ್ಸಿಗಳಲ್ಲಿ (ಪ್ರಾಂತ್ಯ) ನಮ್ಮ ಸರ್ಕಾರಗಳ ಯಂತ್ರ ವ್ಯವಸ್ಥೆಯ ಒಂದು ಭಾಗವಾಗಿ ಶಿಕ್ಷಣ ವಿಭಾಗವನ್ನು ಸ್ಥಾಪಿಸಲು ಸಂಕಲ್ಪಿಸಿದ್ದೇವೆ. ಅದಕ್ಕೆ ಅನುಸಾರವಾಗಿ ಪ್ರತಿ ಪ್ರೆಸಿಡೆನ್ಸಿಗೂ ಒಬ್ಬ ಅಧಿಕಾರಿಯನ್ನು ನೇಮಿಸಬೇಕು ಎಂದು ನಾವು ಪ್ರಸ್ತಾವಿಸುತ್ತೇವೆ. ಶಿಕ್ಷಣಕ್ಕೆ ಸಂಬಂಧಪಟ್ಟ ವ್ಯವಹಾರದ ನಿರ್ವಹಣೆಯ ವಿಶೇಷವಾದ ಹೊಣೆಯನ್ನು ಲೆಫ್ಟಿನೆಂಟ್ ಗವರ್ನರ್ ಅವರು ಹೊರುತ್ತಾರೆ. ಅದರ ನಿರ್ವಹಣೆಯಲ್ಲಿ ಅವರು ನೇರವಾಗಿ ಸರ್ಕಾರಕ್ಕೆ ಜವಾಬ್ದಾರರಾಗಿರುತ್ತಾರೆ.

18. ಭವಿಷ್ಯದಲ್ಲಿ ಸೂಕ್ತವಾದ ಪರಿಶೀಲನೆಯ (ಇನ್‌ಸ್ಪೆಕ್ಷನ್) ವ್ಯವಸ್ಥೆ ಕೂಡ ನಮ್ಮ ಶಿಕ್ಷಣ ವ್ಯವಸ್ಥೆಯ ಒಂದು ಅತ್ಯಗತ್ಯವಾದ ಭಾಗವಾಗುತ್ತದೆ. ಸಾಕಷ್ಟು ಸಂಖ್ಯೆಯ ಅರ್ಹ ಇನ್‌ಸ್ಪೆಕ್ಟರುಗಳನ್ನು ಕೂಡ ನೇಮಕ ಮಾಡಿಕೊಳ್ಳಬೇಕು ಎಂದು ನಾವು ಅಪೇಕ್ಷಿಸಿದ್ದೇವೆ. ಅವರುಪ್ರಸ್ತುತ ಸರ್ಕಾರದಿಂದ ಬೆಂಬಲಿತವಾದ ಮತ್ತು ನಿರ್ವಹಣೆ ಮಾಡಲಾದ ಶಾಲಾ ಕಾಲೇಜುಗಳಷ್ಟೇ ಅಲ್ಲದೆ ನಾವು ಕೈಗೊಳ್ಳುವ

ಕ್ರಮಗಳಿಂದ ಸರ್ಕಾರದ ಪರಿಶೀಲನೆಯ ಅಡಿಯಲ್ಲಿ ಇನ್ನು ಮುಂದೆ ಬರುವಂಥವುಗಳ ಸ್ಥಿತಿಗತಿಗಳನ್ನು ಕುರಿತುಕೂಡ ವರದಿ ಮಾಡುತ್ತಾರೆ. ಈ ಸಂಸ್ಥೆಗಳ ಪದವಿಧರರ ಪರೀಕ್ಷೆಯನ್ನುಅವರು ನಡೆಸುತ್ತಾರೆ ಅಥವಾ ನಡೆಸಲು ನೆರವಾಗುತ್ತಾರೆ.

ಸಾಮಾನ್ಯವಾಗಿ ಅವರ ಸಲಹೆ ಮತ್ತು ಸಹಾಯದಿಂದ ದೇಶದಾದ್ಯಂತ ಎಲ್ಲ ಬಗೆಯ ಶಾಲೆಗಳಲ್ಲಿ ಮತ್ತು ಕಾಲೇಜುಗಳಲ್ಲಿ ನಿರ್ವಾಹಕರು ಮತ್ತು ಶಾಲಾ ಉಪಾಧ್ಯಾಯರು ಕಾರ್ಯ ನಿರ್ವಹಿಸಿಕೊಂಡು ಹೋಗುತ್ತಾರೆ. ಸಹಜವಾಗಿಯೇ ಅವರು ವಿವಿಧ ನಮೂನೆಯವರಾಗಿರುತ್ತಾರೆ ಮತ್ತು ಭೇಟಿಕೊಡಲು ಅವರನ್ನು ನೇಮಿಸಿಕೊಳ್ಳಲಾಗಿರುವ ಸಂಸ್ಥೆಗಳ ಉನ್ನತಅಥವಾ ಕೆಳಹಂತದ ಸ್ವರೂಪಕ್ಕೆ ಅನುಗುಣವಾಗಿ ಅವರು ವಿವಿಧ ಶ್ರೇಣಿಯ ಪಾಂಡಿತ್ಯವನ್ನು ಹೊಂದಿರಬಹುದು. ಆದರೆ ಕೆಳಹಂತದ ಶಾಲೆಗಳ ನೇಮಕಾತಿ ಮಾಡುವಾಗಲೂ ಉನ್ನತ ಚಾರಿತ್ರ್ಯ ಮತ್ತು ಸೂಕ್ತ ವಿವೇಚನೆ ಇರುವ ವ್ಯಕ್ತಿಗಳನ್ನು ಆಯ್ಕೆ ಮಾಡಬೇಕು ಎನ್ನುವುದನ್ನು ನಾವು ಒತ್ತಿ ಹೇಳಬೇಕಾಗಿಲ್ಲ. ಏಕೆಂದರೆ ಕೆಳಹಂತದ ಶಾಲೆಗಳ ಪರಿಣಾಮಕಾರಿ ಸುಧಾರಣೆಗೆ ಹಾಗೂಸೂಕ್ತ ಪರಿಶೀಲನೆಗೆ ಅವರು ಅಗತ್ಯ. ಮಿಗಿಲಾಗಿ ಈ ಶೈಕ್ಷಣಿಕ ಇಲಾಖೆಗಳಿಗೆ ಸೂಕ್ತವಾದ ಗುಮಾಸ್ತರು ಮತ್ತು ಅಧಿಕಾರಿಗಳನ್ನೊಳಗೊಂಡ ಸಿಬ್ಬಂದಿ ವರ್ಗವು ಅಗತ್ಯವಾಗಿರುತ್ತದೆ.

19. ಇನ್‌ಸ್ಪೆಕ್ಟರುಗಳ ನಡಾವಳಿಗಳ ವರದಿಗಳನ್ನು ಕಾಲಕಾಲಕ್ಕೆ ಸಿದ್ಧಪಡಿಸಬೇಕು. ಇವುಗಳನ್ನು ಮತ್ತೆ ಶೈಕ್ಷಣಿಕ ಇಲಾಖೆಗಳ ಮುಖ್ಯಸ್ಥರವಾರ್ಷಿಕ ವರದಿಗಳಲ್ಲಿ ಸೇರಿಸಬೇಕು. ಅಂಕಿ ಅಂಶಗಳ ವರದಿಗಳೊಡನೆ ಇವುಗಳನ್ನು ನಮಗೆ ಕಳುಹಿಸಿಕೊಡಬೇಕು (ಇಂಡಿಯಾದ ಎಲ್ಲ ಭಾಗಗಳಲ್ಲೂ ಇವುಗಳನ್ನು ಒಂದೇ ರೀತಿಯ ನಮೂನೆಗಳಲ್ಲಿ ದಾಖಲಿಸಬೇಕು), ಮತ್ತು ಶಿಕ್ಷಣಕ್ಕೆ ಸಂಬಂಧಪಟ್ಟ ಸಾಮಾನ್ಯ ಸ್ವರೂಪದ ಇತರ ಮಾಹಿತಿಗಳನ್ನು ನಮಗೆ ಕಳುಹಿಸಿಕೊಡಬೇಕು.
20. ಈ ರವಾನೆಯ ಪ್ರತಿಗಳನ್ನು ನಾವು ಫೋರ್ಟ್ ಸೇಂಟ್‌ಜಾರ್ಜ್ ಹಾಗೂ ಬಾಂಬೆ ಸರ್ಕಾರಗಳಿಗೆ ಕಳುಹಿಸಿಕೊಡುತ್ತೇವೆ, ಮತ್ತು ಅವರವರಿಗೆ ಸಂಬಂಧಪಟ್ಟ ಪ್ರಾಂತ್ಯಗಳಲ್ಲಿ ಕೂಡಲೇ ಶಿಕ್ಷಣದ ಮೇಲ್ವಿಚಾರಣೆ ಹಾಗೂ ಪರಿಶೀಲನೆಗೆ ತಾತ್ಕಾಲಿಕ ಏರ್ಪಾಡುಗಳನ್ನು ಮಾಡಬೇಕೆಂದು ನಿರ್ದೇಶನ ನೀಡುತ್ತೇವೆ. ಅವರು ಮಾಡುವ ಅಂತಹ ಏರ್ಪಾಡುಗಳನ್ನು ನಿಮ್ಮ ಅನುಮೋದನೆಗಾಗಿ ಸಲ್ಲಿಸಲಾಗುವುದು. ಬೆಂಗಾಲ್ ಮತ್ತು ಆಗ್ರಾದ ಲೆಫ್ಟಿನೆಂಟ್ ಗವರ್ನರ್‌ಗಳಿಗೆ ಮಾಹಿತಿಯನ್ನು ಕೊಡಲು ನೀವು ಅಂತಹ ಕ್ರಮಗಳನ್ನೇ ತೆಗೆದುಕೊಳ್ಳುತ್ತೀರಿ. ಅಲ್ಲದೆ, ಈ ವಿಚಾರದಲ್ಲಿ ನಾನ್-ರೆಗ್ಯುಲೇಷನ್ ಪ್ರಾಂತ್ಯಗಳ ಬೇಡಿಕೆಗಳಿಗೆ ಸೂಕ್ತವೆಂದು ತೋರುವ ರೀತಿಯಲ್ಲಿ ಕ್ರಮ ಕೈಗೊಳ್ಳುತ್ತೀರಿ. ಈ ವಿಚಾರವಾಗಿ ನಿಮ್ಮ ನಡಾವಳಿಗಳನ್ನು ಸಾಧ್ಯವಾದಷ್ಟು ಬೇಗ ನಮಗೆ ವರದಿ ಮಾಡಬೇಕೆಂದು ಅಪೇಕ್ಷಿಸುತ್ತೇವೆ, ಮತ್ತು ಈ ಉದ್ದೇಶಕ್ಕೆ ಅಗತ್ಯವೆಂದು ನೀವು ಪರಿಗಣಿಸುವ ಅಂತಹ ವೆಚ್ಚವನ್ನು ಮಂಜೂರು ಮಾಡಲು ನಾವು ಸಿದ್ಧರಾಗಿದ್ದೇವೆ.

21. ಶೈಕ್ಷಣಿಕ ಇಲಾಖೆಗಳ ಮುಖ್ಯಸ್ಥರು, ಇನ್‌ಸ್ಪೆಕ್ಟರುಗಳು ಮತ್ತು ಇತರ ಅಧಿಕಾರಿಗಳನ್ನು ಆಯ್ಕೆ ಮಾಡುವಾಗ ಎಂಥ ವ್ಯಕ್ತಿಗಳ ಸೇವೆಯನ್ನು ಪಡೆಯುವುದು ಅತ್ಯಂತ ಮುಖ್ಯವೆಂದರೆ, ಅವರು ನಮ್ಮ ಉದ್ದೇಶಗಳನ್ನು ಅನುಷ್ಠಾನಕ್ಕೆ ತರುವಲ್ಲಿ ತಮ್ಮ ಚಾರಿತ್ರ್ಯ, ಸ್ಥಾನಮಾನ ಮತ್ತು ಪಾಂಡಿತ್ಯದಲ್ಲಿ ಅತ್ಯುತ್ತಮರೂ ಸಮರ್ಥರೂ ಆಗಿರಬೇಕು. ಅಲ್ಲದೆ ಅವರು ಇಂಡಿಯಾದ ಮೂಲನಿವಾಸಿಗಳ ವಿಶ್ವಾಸವನ್ನು ಗಳಿಸುವಂತಹವರಾಗಿರಬೇಕು. ಶೈಕ್ಷಣಿಕ ಇಲಾಖೆಗಳ ಮೊದಲ ಮುಖ್ಯಸ್ಥರನ್ನು ಮತ್ತು ಕೆಲವು ಇನ್‌ಸ್ಪೆಕ್ಟರ್‌ಗಳನ್ನು ನಮ್ಮ ಸಿವಿಲ್ ಸರ್ವಿಸ್ ಸದಸ್ಯರಿಂದಆಯ್ಕೆ ಮಾಡಿಕೊಳ್ಳುವುದು ಪ್ರಾಯಃ ಸೂಕ್ತವಾಗಬಹುದು. ಏಕೆಂದರೆ ಮೊತ್ತಮೊದಲನೆಯದಾಗಿ ಇಂತಹ ನೇಮಕಾತಿಗಳು ಈ ಅಧಿಕಾರಿಗಳ ವಿಷಯದಲ್ಲಿ ಗೌರವವನ್ನು ಹೆಚ್ಚಿಸಲು ಕಾರಣವಾಗುತ್ತವೆ, ಮತ್ತು ಅದು ಶಿಕ್ಷಣದ ವಿಷಯಕ್ಕೆ ನಾವು ನೀಡುವ ಮಹತ್ತ್ವವನ್ನು ತೋರಿಸುತ್ತದೆ. ಅಷ್ಟೇ ಅಲ್ಲದೆ ಅವರಲ್ಲಿ ಈ ಕರ್ತವ್ಯವನ್ನು ನಿರ್ವಹಿಸಲು ಅತ್ಯುತ್ತಮ ಅರ್ಹತೆಯ ವ್ಯಕ್ತಿಗಳನ್ನು ಪ್ರಾಯಃ ನೀವು ಕಾಣಬಹುದು. ಆದರೆ ನಮ್ಮ ಅಪೇಕ್ಷೆ ಏನೆಂದರೆ ಈ ಕಚೇರಿಗಳಿಗಾಗಲಿ ಅಥವಾ ಶಿಕ್ಷಣಕ್ಕೆ ಸಂಬಂಧಪಟ್ಟ ಬೇರೆ ಯಾವುದೇ ಕಚೇರಿಗಳಿಗಾಗಲಿ ಸಿವಿಲ್ ಸರ್ವಿಸ್ ಸದಸ್ಯರಿಂದಲೇ ಸ್ಥಾನಗಳನ್ನು ತುಂಬಲು ಕಟ್ಟು ಬೀಳಬೇಕಾದ ಅಗತ್ಯವಿಲ್ಲ. ಇಂಥ ಸ್ಥಾನಗಳಿಗೆ ಹೆಚ್ಚು ಅರ್ಹರಾದ ಐರೋಪ್ಯರು ಅಥವಾ ಸ್ಥಳೀಯ ದೇಶವಾಸಿಗಳನ್ನು ಹೊರಗಿಡಬೇಕಾಗಿಲ್ಲ. ನೇಮಕಾತಿ ಹೇಗಾದರೂ ಸರಿ, ಅವರ ವೇತನ ಶ್ರೇಣಿಯನ್ನು ಸಾರ್ವಜನಿಕವಾಗಿ ನಿಗದಿ ಪಡಿಸುವಾಗ ಅವರು ಕೈಗೊಳ್ಳಬೇಕಾದ ಮಹತ್ತ್ವದ ಕರ್ತವ್ಯಗಳನ್ನು ಅದು ಮಾನ್ಯ ಮಾಡುವಂತಿರಬೇಕು.

22. ಈಗ ನಾವು ಅಳವಡಿಸಿಕೊಳ್ಳಲು ಉದ್ದೇಶಿಸಿರುವ ಸಾಮಾನ್ಯ ಕ್ರಮಗಳ ರೂಪುರೇಷೆಯನ್ನು ಚಿತ್ರಿಸಲಿದ್ದೇವೆ. ಶಿಕ್ಷಣದ ಪ್ರೋತ್ಸಾಹಕ್ಕಾಗಿ ಇಂಡಿಯಾದ ವಿವಿಧ ಭಾಗಗಳಲ್ಲಿ ನಡೆಸಲಾದ ವಿವಿಧ ಪ್ರಯೋಗಗಳಿಂದ ಗಳಿಸಿದ ಜ್ಞಾನವನ್ನು ಬಳಸಿಕೊಳ್ಳಲು ನಾವು ಪ್ರಯತ್ನಿಸಿದ್ದೇವೆ. ನಮ್ಮ ಆಶಯವೇನೆಂದರೆ ಇಂಡಿಯಾದ ಉದ್ದಗಲಕ್ಕೂ ಅನ್ವಯವಾಗಬಲ್ಲ ವ್ಯವಸ್ಥೆಯೊಂದನ್ನು ನಿರ್ಮಿಸುವುದು. ಈ ವ್ಯವಸ್ಥೆಯು ನಿರ್ದಿಷ್ಟ ಜಿಲ್ಲೆಗಳಲ್ಲಿ ಯಶಸ್ವಿಯಾಗಿ ಅನುಷ್ಠಾನಕ್ಕೆ ತರಲಾದ ಯೋಜನೆಗಳನ್ನು ಸ್ವಲ್ಪ ಹೆಚ್ಚು ಸಾರ್ವತ್ರಿಕವಾಗಿ ಅಳವಡಿಸಿಕೊಳುತ್ತದೆ ಮತ್ತು ಅವುಗಳಲ್ಲಿ ಇಲ್ಲದಿರುವ ಇತರ ಅಂಶಗಳನ್ನು ಸೇರಿಸಿಕೊಳ್ಳುತ್ತದೆ. ಹೀಗೆ ನಮ್ಮ ವಿವಿಧ ಪ್ರೆಸಿಡೆನ್ಸಿಗಳಲ್ಲಿ (ಪ್ರಾಂತ್ಯ) ಶೈಕ್ಷಣಿಕ ಪ್ರಯತ್ನಗಳಿಗೆ ಈಗ ಇರುವುದಕ್ಕಿಂತ ಇನ್ನೂ ಉತ್ತಮ ಶ್ರೇಣಿಯ ಏಕರೂಪತೆ ಮತ್ತು ಕಾರ್ಯವಿಧಾನವನ್ನು ನೀಡುವುದು ಸಾಧ್ಯವಾಗುತ್ತದೆ.

23. ಯಾವುದೇ ಸಾಮಾನ್ಯ ಯೋಜನೆಯ ಎಲ್ಲ ಅಂಶಗಳೂ ಇಂಡಿಯಾದ ಎಲ್ಲ ಪ್ರದೇಶಗಳ ಪ್ರಸ್ತುತ ಸನ್ನಿವೇಶಕ್ಕೆ ಅನ್ವಯವಾಗಲಾರದು ಎಂಬ ಪೂರ್ಣ ಅರಿವು ನಮಗಿದೆ. ಇಂಥ ಪ್ರದೇಶಗಳು ಅನೇಕ ಪ್ರಮುಖ ಅಂಶಗಳಲ್ಲಿ ಪರಸ್ಪರ ಅಗಾಧವಾದ ವ್ಯತ್ಯಾಸಗಳನ್ನು ಹೊಂದಿವೆ. ಮಿಗಿಲಾಗಿ, ನಿರ್ದಿಷ್ಟ ಜಿಲ್ಲೆಗಳನ್ನು ಕುರಿತ ಇತ್ತೀಚಿನ ಮತ್ತು ಪ್ರಾಯೋಗಿಕವಾದ ಪರಿಚಯವನ್ನು ಪಡೆದಿಲ್ಲದವರಿಗೆ, ಪ್ರತಿಯೊಂದು ಪ್ರದೇಶದಲ್ಲೂ ಚಾಲ್ತಿಯಲ್ಲಿರುವ ಭಾವನೆಗಳು ಮತ್ತು ಪ್ರಭಾವಗಳಿಗೆ ನೀಡಬೇಕಾದ ಮಹತ್ತ್ವವನ್ನು ನಿರ್ಧರಿಸುವುದು ಕಷ್ಟವಾಗುತ್ತದೆ.

ಆದ್ದರಿಂದ ನಾವು ಸಾಮಾನ್ಯವಾಗಿಯಾವ ಕೆಲಸ ಆಗಬೇಕೆಂದು ಬಯಸುತ್ತೇವೆಯೋ ಅದನ್ನುಕುರಿತು ವಿವರಿಸುವುದಕ್ಕಷ್ಟೇ ನಮ್ಮನ್ನು ಸೀಮಿತಗೊಳಿಸಿಕೊಂಡಿದ್ದೇವೆ. ಇಂಡಿಯಾದ ವಿವಿಧ ಭಾಗಗಳಲ್ಲಿ ಅಳವಡಿಸಲು ಅನುವಾಗುವಂತೆ ಅನೇಕ ಸ್ಥಳೀಯ ಸರ್ಕಾರಗಳೊಡನೆ ಸಂಪರ್ಕಲ್ಲಿದ್ದು ನಿರ್ದಿಷ್ಟವಾದ ಯೋಜನೆಗಳನ್ನು ಮಾರ್ಪಡಿಸುವ ಹೊಣೆಯನ್ನು ನಿಮಗೇ ಬಿಟ್ಟಿದ್ದೇವೆ.

24. ಕೆಲವು ವರ್ಷಗಳ ಹಿಂದೆ ಶಿಕ್ಷಣ ಮಂಡಲಿಯು ಮಾಡಿದ ಒಂದು ಪ್ರಸ್ತಾವವನ್ನು ಒಪ್ಪಲು ನಾವು ನಿರಾಕರಿಸಿದ್ದೇವೆ. ನಿಮ್ಮ ಸರ್ಕಾರದ ಶಿಫಾರಸ್ಸಿನೊಡನೆ ಕಲ್ಕತ್ತದಲ್ಲಿಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಕೋರಿ ನಮಗೆ ಅದನ್ನು ಕಳುಹಿಸಲಾಗಿತ್ತು. ಆ ಕಾಲದಿಂದ ಈಚೆಗೆ ಇಂಡಿಯಾದ ದೇಶವಾಸಿಗಳಲ್ಲಿ ಮುಕ್ತ ಶಿಕ್ಷಣವು ಕ್ಷಿಪ್ರವಾಗಿ ಪಸರಿಸಿದೆ. ಸರ್ಕಾರಿ ವಿದ್ಯಾರ್ಥಿವೇತನಗಳ ಸ್ಥಳೀಯ ಅಭ್ಯರ್ಥಿಗಳು ಉನ್ನತ ಸಾಧನೆಗಳನ್ನು ತೋರಿದ್ದಾರೆ. ಖಾಸಗಿ ಸಂಸ್ಥೆಗಳ ಸ್ಥಳೀಯ ವಿದ್ಯಾರ್ಥಿಗಳೂ ಸಾಧನೆಗಳನ್ನು ಮಾಡಿದ್ದಾರೆ. ವೈದ್ಯಕೀಯ ಕಾಲೇಜುಗಳು ಯಶಸ್ವಿಯಾಗಿವೆ. ಐರೋಪ್ಯ ಮತ್ತು ಆಂಗ್ಲೊ ಇಂಡಿಯನ್ ಜನಸಂಖ್ಯೆಯಲ್ಲಿ ಆಗಿರುವ ಹೆಚ್ಚಳದಿಂದಾಗಿ ಇಂಡಿಯಾದಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವ ಸಮಯವು ಸನ್ನಿಹಿತವಾಗಿದೆ ಎಂಬ ನಿರ್ಣಯಕ್ಕೆ ನಾವು ಬರುವಂತೆ ಮಾಡಿದೆ. ಅದು ನಿಯಮಿತಮತ್ತು ಮುಕ್ತವಾದ ಶಿಕ್ಷಣ ಕ್ರಮವನ್ನು ಪ್ರೋತ್ಸಾಹಿಸಬಹುದು. ಕಲೆ ಮತ್ತು ವಿಜ್ಞಾನದ ವಿವಿಧ ಶಾಖೆಗಳಲ್ಲಿ ಮಾಡಿದ ಸಾಧನೆಗಳಿಗೆ ಸಾಕ್ಷಿಯಾಗಿ ಶೈಕ್ಷಣಿಕ ಪದವಿಗಳನ್ನು ಪ್ರದಾನ ಮಾಡಬಹುದು. ಗೌರವಾನ್ವಿತ ಮನ್ನಣೆಗೆ ಸ್ಪರ್ಧಿಸಬಯಸುವವರಿಗೆಗೌರವದ ಅಂಕಗಳನ್ನು ಸೇರಿಸಬಹುದು.

25. ನಾವು ಸೂಚಿಸಿದ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಶಿಕ್ಷಣ ಮಂಡಲಿಯು ಲಂಡನ್ ವಿಶ್ವವಿದ್ಯಾಲಯವನ್ನು ತನ್ನ ಮಾದರಿಯಾಗಿ ಆರಿಸಿಕೊಂಡಿತು. ಆ ವಿಶ್ವವಿದ್ಯಾಲಯದ ಸ್ವರೂಪ, ನಿರ್ವಹಣೆ ಮತ್ತು ಕಾರ್ಯವಿಧಾನಗಳನ್ನು (ಅದರ ಸನ್ನದುಗಳು ಮತ್ತು ನಿಯಮಾವಳಿಗಳ ಪ್ರತಿಗಳನ್ನು ನಿಮ್ಮ ಅವಗಾಹನೆಗಾಗಿ ನಾವು ಲಗತ್ತಿಸಿದ್ದೇವೆ) ಇಂಡಿಯಾದ ಅಗತ್ಯಗಳಿಗೆ ಅತ್ಯುತ್ತಮವಾಗಿ ಅಳವಡಿಸಿಕೊಳ್ಳಬಹುದು ಎಂಬ ಅವರ ಅಭಿಪ್ರಾಯವನ್ನು ನಾವು ಒಪ್ಪುತ್ತೇವೆ. ಅವುಗಳನ್ನು ಅನುಕೂಲಕರವಾಗಿಅನುಸರಿಸಬಹುದು. ಆದರೆ ವಿವರಗಳಿಗೆ ಸಂಬಂಧಿಸಿದಂತೆ ಕೆಲವು ಮಾರ್ಪಾಡುಗಳು ಅಗತ್ಯವಾಗಬಹುದೇನೋ.

26. ಆ ಪ್ರಕಾರವಾಗಿ ಇಂಡಿಯಾದ ವಿಶ್ವವಿದ್ಯಾಲಯಗಳಲ್ಲಿ ಕುಲಾಧಿಪತಿ, ಕುಲಪತಿ ಮತ್ತು ಸೆನೆಟ್‌ನ ಸದಸ್ಯರು ಇರುತ್ತಾರೆ. ಸೆನೆಟ್‌ಗಳು ವಿಶ್ವವಿದ್ಯಾಲಯದ ನಿಧಿಗಳ ನಿರ್ವಹಣೆ ಮಾಡುತ್ತವೆ. ನಿಮ್ಮ ಅನುಮೋದನೆಗಾಗಿ ನಿಯಮಾವಳಿಗಳನ್ನು ರೂಪಿಸುತ್ತವೆ. ಅವುಗಳ ಅಡಿಯಲ್ಲಿ ಕಲೆ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದ ವಿವಿಧ ಶಾಖೆಗಳಲ್ಲಿ ಕಾಲಕಾಲಕ್ಕೆ ಪರೀಕ್ಷೆಗಳನ್ನು ನಡೆಸಲಾಗುತ್ತದೆ. ಅವರದೇ ನಿಕಾಯಗಳಿಂದ ಆಯ್ಕೆ ಮಾಡಲಾದಅಥವಾ ಅವರಿಂದ ನಾಮ ನಿರ್ದೇಶಿಸಲಾದ ಪರೀಕ್ಷರು ಪರೀಕ್ಷೆಗಳನ್ನು ನಡೆಸುತ್ತಾರೆ.

27. ನಿಗದಿಗೊಳಿಸಲಾದ ನಿಯಮಗಳ ಅನುಸಾರವಾಗಿ ಅಭ್ಯರ್ಥಿಗಳಾಗಿ ಪ್ರವೇಶ ಪಡೆದ ವ್ಯಕ್ತಿಗಳಿಗೆ ಪದವಿಗಳನ್ನು ಪ್ರದಾನ ಮಾಡುವುದು ವಿಶ್ವವಿದ್ಯಾಲಯಗಳ ಕಾರ್ಯವಾಗಿರುತ್ತದೆ. ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿದಾಗ ಅವುಗಳೊಡನೆ

ನಮೂದಿಸಿಕೊಳ್ಳಲಾದ ಯಾವುದೇ ``ಅಂಗಸಂಸ್ಥೆಗಳಿಂದ" ಅವರು ಬಂದವರಾಗಿರಬೇಕು ಅಥವಾ ಸರ್ಕಾರವು ಕಾಲದಿಂದ ಕಾಲಕ್ಕೆ ಸೇರಿಸಿದ ವಿದ್ಯಾ ಸಂಸ್ಥೆಗಳಾಗಿರಬಹುದು. ಅವರು ಸನ್ನಡತೆಯ ಪ್ರಮಾಣಪತ್ರವನ್ನು ಹೊಂದಿರಬೇಕು, ಮತ್ತು ಒಂದು ನಿರ್ದಿಷ್ಟ ಅವಧಿಯವರೆಗೆ ನಿಯಮಿತ ಶಿಕ್ಷಣಕ್ರಮಕ್ಕೆ (ಕೋರ್ಸ್) ಹಾಜರಾಗಿರಬೇಕು. ವಿಶ್ವವಿದ್ಯಾಲಯಗಳಲ್ಲಿ ಅಗತ್ಯವಾದ ಪರೀಕ್ಷೆಯಲ್ಲಿಅವರು ತೇರ್ಗಡೆಯಾಗಿರಬೇಕು. ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಲಂಡನ್ ವಿಶ್ವವಿದ್ಯಾಲಯದಲ್ಲಿ ಇರುವ ಕಡ್ಡಾಯ ಹಾಜರಾತಿಯನ್ನು ಇಲ್ಲಿ ಕೈಬಿಡಬೇಕೆಂದು ಸೂಚಿಸಲಾಗಿದೆ. ಅದರ ಬದಲಿಗೆ ಯಾವುದಾದರೊಂದು ಬಗೆಯ ಪ್ರವೇಶ ಪರೀಕ್ಷೆಯನ್ನು ನಿಗದಿಪಡಿಸಬಹುದು. ಆಗ ವಿಶ್ವವಿದ್ಯಾಲಯಗಳಿಗೆ ಅಂತಿಮ ಪರೀಕ್ಷೆಗೂ ಮೊದಲು ಹಾಜರಾಗುವ ಅಗತ್ಯವಿಲ್ಲದೆ ಪದವಿಗಳನ್ನು ಪಡೆಯಲು ಅಭ್ಯರ್ಥಿಗಳು ಅರ್ಹರಾಗಿದ್ದಾರೆಂಬುದನ್ನು ಅದು ಖಚಿತಪಡಿಸುತ್ತದೆ.

28. ಪದವಿ ಪರೀಕ್ಷೆಗಳಲ್ಲಿ ರಿಲಿಜನ್ನಿನ ನಂಬಿಕೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಸೇರಿಸಲಾಗುವುದಿಲ್ಲ. ಅಂಗ ಸಂಸ್ಥೆಗಳು ಒಂದಿಲ್ಲೊಂದು ರಿಲಿಜನ್ನಿನ ಅನುಯಾಯಿಗಳ ನಿರ್ವಹಣೆಗೊಳಪಟ್ಟಿರುತ್ತವೆ. ಇಂಗ್ಲೆಂಡಿನಲ್ಲಿ ವಿವಿಧ ಸಂಸ್ಥೆಗಳು ಪ್ರೆಸ್ಬಿಟೇರಿಯನ್ ಕಾಲೇಜ್ ಅಟ್ ಸೀರ್‌ಮಾರ್ಥೆನ್, ದರೋಮನ್ ಕ್ಯಾಥೊಲಿಕ್ ಕಾಲೇಜ್ ಅಟ್ ಓಸ್ಕಾಟ್, ದ ವೆಸ್ಲಿಯನ್ ಕಾಲೇಜ್‌ಅಟ್ ಷೆಫೀಲ್ಡ್, ದ ಬ್ಯಾಪ್ಟಿಸ್ಟ್ ಕಾಲೇಜ್ ಅಟ್ ಬ್ರಿಸ್ಟಲ್, ಮತ್ತು ಕೌಂಟೆಸ್ ಆಫ್ ಹಂಟಿಂಗ್ ಡನ್ಸ್ ಕಾಲೇಜ್ ಅಟ್ ಜೆಷಂಟ್ ಚರ್ಚ್ ಆಫ್ ಇಂಗ್ಲೆಂಡ್ ನೊಡನೆ ನೇರ ಸಂಪರ್ಕವನ್ನು ಹೊಂದಿವೆ. ಇವು ಕೆಲವು ಲಂಡನ್ ವಿಶ್ವವಿದ್ಯಾಲಯಕ್ಕೆ ಸೇರಿದ ಸಂಸ್ಥೆಗಳಾಗಿವೆ ಇವುಗಳಿಂದ ಪದವಿ ಪ್ರಮಾಣಪತ್ರಗಳನ್ನು ಸ್ವೀಕರಿಸಲು ಲಂಡನ್ ವಿಶ್ವವಿದ್ಯಾಲಯವು ಅಧಿಕಾರ ಹೊಂದಿದೆ. ಆದ್ದರಿಂದ ಇಂಡಿಯಾದಲ್ಲಿ ಕ್ರೈಸ್ತರು, ಹಿಂದೂಗಳು, ಮಹಮದೀಯರು, ಪಾರ್ಸಿಗಳು, ಸಿಖ್ಖರು, ಬೌದ್ಧರು, ಜೈನರು ಅಥವಾ ಬೇರೆಯಾವುದೇ ರಿಲಿಜನ್ನುಗಳನ್ನು ಅನುಸರಿಸುವ ಪಂಥದವರು ನಡೆಸುವ ಸಂಸ್ಥೆಗಳು ವಿಶ್ವವಿದ್ಯಾಲಯಗಳಲ್ಲಿ ಅಂಗಸಂಸ್ಥೆಗಳಾಗಿ ಸೇರಿಕೊಳ್ಳಬಹುದು ಮತ್ತು ಅಗತ್ಯವಾದ ನಡವಳಿಕೆಯ ಪ್ರಮಾಣ ಪತ್ರಗಳ ಸಲುವಾಗಿ ಅವುಗಳ ಮೇಲೆ ಅವಲಂಬಿತವಾಗಬಹುದು.

29. ಅಂಗಸಂಸ್ಥೆಗಳಾಗಿ ಸೇರಿದ ವಿದ್ಯಾಸಂಸ್ಥೆಗಳ ಎಲ್ಲ ವರ್ಗಗಳಿಗೂ ಸೂಕ್ತ ಮನ್ನಣೆಯನ್ನು ನೀಡಿ ಪದವಿ ಪರೀಕ್ಷೆಗಳಿಗೆ ವಿವರವಾದ ನಿಯಮಾವಳಿಗಳನ್ನು ರಚಿಸಬೇಕು. ಈ ವಿಷಯವನ್ನು ಕುರಿತು ನಮ್ಮ ಅವಲೋಕನವೇನೆಂದರೆ ಸಾಮಾನ್ಯ ಪದವಿಗಳ ಮಾನದಂಡವನ್ನು ಅತ್ಯುನ್ನತ ವಿವೇಚನೆಯಿಂದ ನಿಗದಿಪಡಿಸಬೇಕು. ಮುಕ್ತ ಶಿಕ್ಷಣಕ್ಕೆ ಮಾನ್ಯತೆಯನ್ನು ನೀಡುವ ಶೈಕ್ಷಣಿಕ ಪದವಿಯ ಗೌರವಕ್ಕೆ ಅರ್ಹರಾದ ಅನೇಕ ಜನರಿದ್ದಾರೆ ಅವರಿಗೆ ಪರೀಕ್ಷೆಯು ಹಿರಿಯ ಸರ್ಕಾರಿ ವಿದ್ಯಾರ್ಥಿವೇತನದ ಪರೀಕ್ಷೆಯಷ್ಟು ಕಠಿಣವಾಗಿದ್ದರೆ ಅದನ್ನು ಪಡೆಯುವ ಭರವಸೆ ಅವರಿಗಿರುವುದಿಲ್ಲ. ಅರ್ಹ ವಿದ್ಯಾರ್ಥಿಗಳ ಪ್ರಯತ್ನಗಳನ್ನು ನಿರುತ್ಸಾಹಗೊಳಿಸದೆ ಗೌರವ ನೀಡುವ ರೀತಿಯಲ್ಲಿ ಅಗತ್ಯ ಮಾನದಂಡವು ಇರಬೇಕಾಗುತ್ತದೆ. ವಿದ್ಯಾರ್ಥಿಗಳನ್ನು ನಿರುತ್ಸಾಹಗೊಳಿಸುವುದು ವಿಶ್ವವಿದ್ಯಾಲಯದ ಯಶಸ್ಸಿಗೆ ಒಂದುದೊಡ್ಡಅಡಚಣೆಯಾಗಬಹುದು. ಆನರ್ಸ್

ವಿಶೇಷ ಪದವಿಗಳಿಗೆ ನಡೆಯುವ ಸ್ಪರ್ಧೆಯು ಲಂಡನ್ ವಿಶ್ವವಿದ್ಯಾಲಯದ ರೀತಿಯಲ್ಲಿಯೇ ಇರುತ್ತದೆ. ಅದು ಪದವಿಗಳಿಗೆ ನಡೆಯುವ ಪರೀಕ್ಷೆಗಳ ಅನಂತರ ಬರುತ್ತದೆ. ಅತ್ಯುನ್ನತ ಸಾಮರ್ಥ್ಯ ಮತ್ತು ಮೌಲಿಕವಾದ ಸಾಧನೆಗಳನ್ನು ಖಾತ್ರಿಪಡಿಸುವ ರೀತಿಯಲ್ಲಿ ಮಾನದಂಡವನ್ನು ನಿಗದಿ ಪಡಿಸುವ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು. ಪರೀಕ್ಷೆಗೆ ವಿಷಯಗಳನ್ನು ಆಯ್ಕೆ ಮಾಡುವಾಗ ಅಂಗ ಸಂಸ್ಥೆಗಳಲ್ಲಿ ಅನುಸರಿಸುವ ವಿವಿಧಅಧ್ಯಯನ ಯೋಜನೆಗಳ ಅತ್ಯುತ್ತಮ ಭಾಗಗಳನ್ನು ಸೇರಿಸಬೇಕು.

30. ವಿವಿಧ ಜ್ಞಾನ ಶಾಖೆಗಳಲ್ಲಿ ಉಪನ್ಯಾಸಗಳನ್ನು ನೀಡುವ ಉದ್ದೇಶದಿಂದ ಪ್ರಾಧ್ಯಾಪಕ ಹುದ್ದೆಗಳನ್ನು ವಿಶ್ವವಿದ್ಯಾಲಯಗಳಲ್ಲಿ ಸ್ಥಾಪಿಸುವುದು ಅಪೇಕ್ಷಣೀಯ. ಉನ್ನತ ಪದವಿ ತರಗತಿಗಳಲ್ಲಿ ಅಂತಹಜ್ಞಾನವನ್ನು ಗಳಿಸಲು ಇಂಡಿಯಾದ ವಿದ್ಯಾಸಂಸ್ಥೆಗಳಲ್ಲಿ ಈಗ ಸೌಲಭ್ಯಗಳು ಅಸ್ತಿತ್ವದಲ್ಲಿ ಇಲ್ಲ. ಇಂತಹ ವಿಷಯಗಳ ಪೈಕಿ ಕಾನೂನು ಅತ್ಯಂತ ಮುಖ್ಯವಾದ ವಿಷಯವಾಗಿದೆ. ಈ ಹಿಂದೆ ಶಿಕ್ಷಣ ಮಂಡಲಿಯ ಯೋಜನೆಯಲ್ಲಿ ಕೆಲವು ಉಪನ್ಯಾಸಗಳಿಗೆ ಹಾಜರಾದರೆ ಕಾನೂನಿನಲ್ಲಿ ಪದವಿಯನ್ನು ಗಳಿಸಬಹುದು ಎಂದು ನಾವು ಪ್ರಸ್ತಾಪಿಸಿದ್ದೆವು. ಹಾಗೂ ವಕೀಲರಿಗೆ ಮತ್ತು ಮುನ್ಸೀಫರಿಗೆ ಅದನ್ನುಒಂದು ಅರ್ಹತೆಯನ್ನಾಗಿ ಮಾಡಬಹುದು ಎಂದೂ ಪ್ರಸ್ತಾಪಿಸಿದ್ದೆವು. ಆದರೆಇನ್ನು ಮುಂದೆ ಅಂಥ ಪದವಿಯನ್ನು ವಕೀಲರಿಗೆ ಮತ್ತು ಮುನ್ಸೀಫರಿಗೆ ಈಗಿನ ಪರೀಕ್ಷಾ ಪದ್ಧತಿಗೆ ಬದಲಾ ಗಿಒಂದು ಅರ್ಹತೆಯನ್ನಾಗಿ ಮುಂದುವರಿಸಬಹುದೆ ಇಲ್ಲವೆ ಎಂಬುದನ್ನು ನೀವೇ ನಿರ್ಧರಿಸಬೇಕು. ಅಥವಾ ವಿಶ್ವವಿದ್ಯಾಲಯಕ್ಕೆ ದುರ್ಗಮವಾದ ಪ್ರದೇಶಗಳಲ್ಲಿ ಅಂಥಪರೀಕ್ಷಾ ಪದ್ಧತಿಯನ್ನು ಮುಂದುವರಿಸುವ ಅನಿವಾರ್ಯತೆ ಇರುವುದರಿಂದ ಈಗಿನ ಪರೀಕ್ಷಾ ಪದ್ಧತಿಗೆ ಹೆಚ್ಚುವರಿಯಾಗಿ ಅದನ್ನು ಸೇರಿಸಿಕೊಳ್ಳಬೇಕೆ ಎಂಬುದನ್ನು ನಿಮ್ಮ ನಿರ್ಣಯಕ್ಕೆ ಬಿಟ್ಟಿದ್ದೇವೆ.

31. ಸಿವಿಲ್ ಇಂಜಿನಿಯರಿಂಗ್ ಇನ್ನೊಂದು ಮಹತ್ತ್ವದ ವಿಷಯವಾಗಿದೆ. ಒಂದು ವೃತ್ತಿಯಾಗಿ ಅದರ ಅನುಕೂಲಗಳು ಭಾರತದ ನಿವಾಸಿಗಳಿಗೆ ಕ್ರಮೇಣ ಅರಿವಿಗೆ ಬರುತ್ತಿವೆ. ರೂರ್ಕಿಯಥಾಮ್‌ಸನ್ ಕಾಲೇಜ್ ಆಫ್ ಸಿವಿಲ್ ಇಂಜಿನಿಯರಿಂಗ್‌ನಲ್ಲಿ ನೀಡಲಾಗುತ್ತಿರುವ ಪ್ರಾಯೋಗಿಕ ಸ್ವರೂಪದ ಶಿಕ್ಷಣವು ಯಾವುದೇ ರೀತಿಯ ಉಪನ್ಯಾಸಗಳಿಗಿಂತ ಎಷ್ಟೋ ಪಾಲು ಉಪಯುಕ್ತವಾಗಿರುವ ಸಾಧ್ಯತೆಯಿದೆ ಎಂದು ನಮಗನಿಸುತ್ತದೆ. ವಿಶ್ವವಿದ್ಯಾಲಯಗಳಿಗೆ ಸಿವಿಲ್ ಇಂಜಿನಿಯರಿಂಗ್ ಪ್ರಾಧ್ಯಾಪಕರ ಹುದ್ದೆಗಳನ್ನು ನೇಮಿಸಬೇಕು ಪ್ರಾಯಃ ಲಗತ್ತಿಸಬೇಕು ಮತ್ತು ಅವುಗಳ ಸಾಮಾನ್ಯ ಪಠ್ಯಕ್ರಮದಲ್ಲಿ ಸಿವಿಲ್ ಇಂಜಿನಿಯರಿಂಗ್ ಪದವಿಗಳನ್ನು ಸೇರಿಸಬೇಕು.

32. ಉಪಯುಕ್ತ ಕಲಿಕೆಯ ಇತರ ಶಾಖೆಗಳು ತಾವಾಗಿಯೇ ತಿಳಿಸುವಂತೆ ಅಲ್ಲಿ ಉಪನ್ಯಾಸಗಳನ್ನು ವ್ಯಾಸಂಗ ಮಾಡಬೇಕು ಮತ್ತು ವಿಶೇಷ ಪದವಿಗಳನ್ನು ಪ್ರದಾನ ಮಾಡಬೇಕು. ಇಂಡಿಯಾದ ದೇಶೀಯ ಭಾಷೆಗಳನ್ನು ಬೆಳೆಸುವುದಕ್ಕೆ ಬಹಳಷ್ಟು ಉತ್ತೇಜನವನ್ನು ಕೊಡಬೇಕೆಂದರೆ ಆ ಭಾಷೆಗಳಲ್ಲಿ ಪ್ರಾಧ್ಯಾಪಕ ಪೀಠಗಳನ್ನು ಸ್ಥಾಪಿಸಬೇಕು. ಪ್ರಾಯಃ ಸಂಸ್ಕೃತ, ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳಿಗೂ ಸ್ಥಾಪಿಸಬೇಕು. ಇಂಡಿಯಾದ ಬಹುಭಾಗದ ದೇಶೀಯ ಭಾಷೆಗಳಿಗೆ ಮೂಲವಾದ ಸಂಸ್ಕೃತ ಭಾಷೆಯ ಜ್ಞಾನವು, ಆ ಭಾಷೆಗಳಲ್ಲಿ ಕೃತಿರಚನೆ

ಮಾಡುವವರಿಗೆ ವಿಶೇಷವಾಗಿ ಆವಶ್ಯಕವಾಗಿದೆ. ಇತ್ತ ಪರ್ಷಿಯನ್ ಮೂಲಕ ಅರೇಬಿಕ್ ಭಾಷೆಯು ಉರ್ದುಭಾಷೆಯ ಅಂಗಭಾಗಗಳಲ್ಲಿ ಒಂದು ಆಗಿದೆ. ಅದೂ ಹಿಂದೂಸ್ಥಾನದ ವ್ಯಾಪಕ ಪ್ರದೇಶವನ್ನು ಆವರಿಸಿಕೊಂಡಿದೆ. ಅದಕ್ಕೆ ಗಣನೀಯವಾದ ಬೆಳವಣಿಗೆಯ ಸಾಮರ್ಥ್ಯವಿದೆ ಎಂದು ನಮಗೆ ತಿಳಿದುಬಂದಿದೆ. ಈ ಭಾಷೆಗಳ ವ್ಯಾಕರಣವನ್ನು ರಚಿಸಿದೇಶದ ಮೌಖಿಕ ಭಾಷೆಗಳ ಸುಧಾರಣೆಗೆ ಅವುಗಳನ್ನು ಅನ್ವಯಿಸುವುದು - ಈ ಅಂಶಗಳ ಕಡೆಗೆ ಆ ಪ್ರಾಧ್ಯಾಪಕರು ತಮ್ಮ ಗಮನವನ್ನು ಮುಖ್ಯವಾಗಿ ಕೇಂದ್ರೀಕರಿಸಬೇಕಾಗುತ್ತದೆ. ಹಿಂದೂ ಅಥವಾ ಮುಸ್ಲಿಮ್ ಮತಗಳ ಬೋಧನೆಗೆ ಸಂಬಂಧಿಸದ ಕ್ಷೇತ್ರದಲ್ಲಿ ತಮ್ಮ ಪರಿಶ್ರಮವನ್ನು ನಡೆಸಲು ಅವರಿಗೆ ಸಾಕಷ್ಟು ಅವಕಾಶವಿರುತ್ತದೆ. ನಾವು ಸದಾನಂಬಿಕೊಂಡಿರುವ ಮತೀಯ ತಾಟಸ್ಥ್ಯದ ತತ್ತ್ವಗಳಿಗೆ ತದ್ವಿರುದ್ಧವಾದ ಯಾವುದೇ ಬೋಧನೆಗಳಿಗೆ ಮನ್ನಣೆ ನೀಡಲು ನಾವು ನಿರಾಕರಿಸತಕ್ಕದ್ದು.

33. ಈಗ ನಾವು ನಿಮಗೆ ವಿವರಿಸಿದ ಸಾಮಾನ್ಯ ತತ್ತ್ವಗಳನ್ನು ಆಧರಿಸಿ ಕಲ್ಕತ್ತ ಮತ್ತು ಬಾಂಬೆಗಳಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವುದನ್ನು ನಿಮ್ಮ ಪರಿಗಣನೆಗೆ ತೆಗೆದುಕೊಳ್ಳಬೇಕೆಂದು ನಾವು ಅಪೇಕ್ಷಿಸುತ್ತೇವೆ, ಮತ್ತು ಇಂಡಿಯಾದ ವಿಧಾನ ಪರಿಷತ್ತಿನ ಅಧಿನಿಯಮಗಳಿಗೆ ಅವುಗಳನ್ನು ಒಳಪಡಿಸುವ ಅತ್ಯುತ್ತಮ ಕಾರ್ಯವಿಧಾನ ಯಾವುದೆಂದು ನಮಗೆ ವರದಿ ಮಾಡಬೇಕೆಂದು ಬಯಸುತ್ತೇವೆ. ಶಿಕ್ಷಣದ ಉದ್ದೇಶಕ್ಕಾಗಿ ಆಸಕ್ತಿಯನ್ನು ತೋರಿಸಿದ, ಅತ್ಯುನ್ನತ ಸ್ಥಾನಗಳಲ್ಲಿರುವ ವ್ಯಕ್ತಿಗಳು ಸಹಜವಾಗಿಯೇ ಕುಲಾಧಿಪತಿಗಳು ಮತ್ತು ಕುಲಪತಿಗಳ ಸ್ಥಾನಗಳನ್ನು ತುಂಬುತ್ತಾರೆ. ಈ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆಯೇ ನಾವು ಕಲ್ಕತ್ತದಲ್ಲಿರುವ ಶಿಕ್ಷಣ ಪರಿಷತ್ತು ಮತ್ತು ಬಾಂಬೆಯಲ್ಲಿರುವ ಶಿಕ್ಷಣ ಮಂಡಲಿಗಳ ಸೇವೆಗಳನ್ನು ಬಳಸಿಕೊಳ್ಳಲು ಉದ್ದೇಶಿಸಿದ್ದೇವೆ. ಅವರು ಶಿಕ್ಷಣದ ಪ್ರಗತಿಗಾಗಿ ಪಟ್ಟ ಪರಿಶ್ರಮವನ್ನುಗುರುತಿಸುವುದಷ್ಟೇ ಅಲ್ಲದೇ ವಿಷಯವನ್ನುಕುರಿತ ತಮ್ಮ ಹಿಂದಿನ ಅನುಭವದ ಲಾಭವನ್ನು ನೀಡುವಂಥ ಸ್ಥಾನದಲ್ಲಿ ಈ ಸಜ್ಜನರನ್ನು ಇರಿಸಬೇಕೆಂದು ನಾವು ಬಯಸಿದ್ದೇವೆ. ಆದ್ದರಿಂದ ನಾವು ಉದ್ದೇಶಿಸಿರುವುದೇನೆಂದರೆ ಕಲ್ಕತ್ತದ ಶಿಕ್ಷಣ ಪರಿಷತ್ತು ಮತ್ತು ಬಾಂಬೆಯ ಶಿಕ್ಷಣ ಮಂಡಲಿಗೆ ಹೆಚ್ಚುವರಿಯಾಗಿ ಕೆಲವು ಸದಸ್ಯರನ್ನು ಸರ್ಕಾರದಿಂದ ನಾಮನಿರ್ದೇಶನ ಮಾಡಿ ಆ ಪ್ರತಿಯೊಂದು ಪ್ರೆಸಿಡೆನ್ಸಿಗಳಲ್ಲೂ (ಪ್ರಾಂತ್ಯ) ಅವು ವಿಶ್ವವಿದ್ಯಾಲಯದ ಸೆನೆಟ್ ಆಗಿ ನಿಯೋಜಿತಗೊಳ್ಳಬೇಕು.

34. ಈ ಹೆಚ್ಚುವರಿ ಸದಸ್ಯರನ್ನು ಹೇಗೆ ಆಯ್ಕೆ ಮಾಡಬೇಕೆಂದರೆ ಅವರು ಇಂಡಿಯಾದ ವಿಭಿನ್ನ ಶಿಕ್ಷಣ ವ್ಯವಸ್ಥೆಗಳ ಪ್ರತಿನಿಧಿಗಳಾಗಿರಬೇಕು, ಎಲ ಮತೀಯ ಶ್ರದ್ಧೆಗಳಿಗೆ ಸೇರಿದ ದೇಶವಾಸಿ ಸಮುದಾಯಗಳನ್ನೊಳಗೊಂಡ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಅಂಥ ಶಿಕ್ಷಣವು ಜಾರಿಯಲ್ಲಿರಬೇಕು. ಇದರಿಂದ ಸೆನೆಟ್‌ಗಳಲ್ಲಿ ನ್ಯಾಯಸಮ್ಮತವಾದಧ್ವನಿಗೆ ಅವಕಾಶ ನೀಡಿದಂತಾಗುತ್ತದೆ. ಪ್ರಸ್ತಾವಿತಕಲ್ಕತ್ತ ವಿಶ್ವವಿದ್ಯಾಲಯದ ಸೆನೆಟ್ ಅನ್ನು ರಚಿಸುವಾಗ, 1845ರಲ್ಲಿ ಶಿಕ್ಷಣ ಪರಿಷತ್ತು ಹಾಕಿದ ಯೋಜನೆಯನ್ನು ಗಮನಿಸಿ ನಾವು ಇಂತಹ ಟೀಕೆಯನ್ನು ಮಾಡಬೇಕಾಗಿ ಬಂದಿದೆ. ಏಕೆಂದರೆ ಅದು ಸಾಕಷ್ಟು ಪ್ರಾತಿನಿಧಿಕವಾಗಿರಲಿಲ್ಲ.

35. ಮದ್ರಾಸಿನಲ್ಲಿ ಅಥವಾ ಇಂಡಿಯಾದ ಯಾವುದೇ ಭಾಗದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಮಂಜೂರು ಮಾಡಲು ನಾವು ಸಿದ್ಧರಾಗಬೇಕು. ಅಲ್ಲಿ

ಸಾಕಷ್ಟು ಸಂಖ್ಯೆಯಲ್ಲಿ ಶಿಕ್ಷಣ ಸಂಸ್ಥೆಗಳು ಅಸ್ತಿತ್ವದಲ್ಲಿವೆ. ಅವುಗಳಿಂದ ಪದವಿಗಳಿಗೆ ಯೋಗ್ಯವಾದ ಅರ್ಹತೆಯ ಅಭ್ಯರ್ಥಿಗಳನ್ನು ಒದಗಿಸಲು ಸಾಧ್ಯವಾಗುತ್ತದೆ. ಮುಕ್ತ ಶಿಕ್ಷಣದ ವಿಸ್ತರಣೆಯಾಗುತ್ತಿದ್ದಂತೆಯೇ ಐರೋಪ್ಯ ಸರ್ಕಾರದ ಮಹಾನ್ ಕೇಂದ್ರಗಳು ಮತ್ತು ಇಂಡಿಯಾದ ನಾಗರಿಕತೆಗೆ ಅನುರೂಪವಾದ ಲಕ್ಷಣಗಳನ್ನುಳ್ಳ ವಿಶ್ವವಿದ್ಯಾಲಯಗಳನ್ನು ಇಂಡಿಯಾವು ಹೊಂದಿರಬೇಕು ಎಂಬುದು ನಮ್ಮ ಅಭಿಪ್ರಾಯವಾಗಿದೆ. ಹಾಗಾಗಿ ಅಂಥ ವಿಶ್ವವಿದ್ಯಾಲಯಗಳ ಸ್ಥಾಪನೆಯು ದೇಶವಾಸಿಗಳ ಸಮುದಾಯಗಳಿಗೆ ಉಪಯುಕ್ತವಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

36. ಶಿಕ್ಷಣದ ಸಾಮಾನ್ಯ ನಿರ್ವಹಣೆಗೆ ಮತ್ತು ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಅವಕಾಶವನ್ನು ಕಲ್ಪಿಸಿದ ನಂತರ ಗಮನಿಸಬೇಕಾದ ಸಂಗತಿಯೆಂದರೆ ವಿಶ್ವವಿದ್ಯಾಲಯಗಳು ಸ್ವತಃಕಲಿಕೆಯ ಸ್ಥಳಗಳಾಗಿರುವುದಕ್ಕಿಂತ ಬೇರೆಡೆ ಸಿಗುವ ಶಿಕ್ಷಣದ ಮೌಲ್ಯವನ್ನು ಪರೀಕ್ಷಿಸುವ ಸ್ಥಳಗಳಾಗಿವೆ. ಈ ಸಂಬಂಧಿಸಿ ಮೊದಲನೆಯದಾಗಿ ನಾವು ಪರಿಗಣಿಸುವುದೇನೆಂದರೆ, ಏಕಕಾಲದಲ್ಲಿ ಕ್ರಿಯಾಶೀಲವಾಗಿರುವಂತೆ ವಿವಿಧ ದರ್ಜೆಯ ಶಾಲೆಗಳು ಮತ್ತು ಕಾಲೇಜುಗಳನ್ನು ನಿರ್ವಹಿಸುವುದು. ಇಂಡಿಯಾದ ದೇಶವಾಸಿಗಳ ಎಲ್ಲ ವರ್ಗಗಳ ಜನಗಳಿಗೆ ಎಟುಕುವಂತೆ ಅವುಗಳನ್ನು ಸ್ಥಾಪಿಸುವುದು. ಅವರ ಜೀವನದ ವಿವಿಧ ಪರಿಸ್ಥಿತಿಗಳಿಗೆ ಸೂಕ್ತವಾಗುವಂತಹ ಜ್ಞಾನದ ಸುಧಾರಣೆಗೆ ಅವು ಸಾಧನವಾಗಬೇಕು. ಎರಡನೆಯದು ಶಿಕ್ಷಣ ಸಂಸ್ಥೆಗಳ ಪ್ರತಿ ವರ್ಗಕ್ಕೂ ಸರ್ಕಾರವು ನೀಡಬಹುದಾದ ಅತ್ಯಂತ ಪರಿಣಾಮಕಾರಿಯಾದ ನೆರವಿನ ಸ್ವರೂಪ.

37. ನಾವು ಆಗಲೇ ವಿವರಿಸಿದಂತೆ ವಿಶ್ವವಿದ್ಯಾಲಯಗಳ ಪದವಿಗಳಿಗೆ ಓದಲು ಬಯಸುವ ಅಭ್ಯರ್ಥಿಗಳನ್ನು ವಿಶ್ವವಿದ್ಯಾಲಯಗಳಿಗೆ ಅಂಗಸಂಸ್ಥೆಗಳಾದ ಕಾಲೇಜುಗಳು ಒದಗಿಸುತ್ತವೆ. ವಿಶ್ವವಿದ್ಯಾಲಯದ ಪದವಿಗಳನ್ನು ಪ್ರದಾನ ಮಾಡುವ ಕಲೆ ಮತ್ತು ವಿಜ್ಞಾನದ ವಿವಿಧ ಶಾಖೆಗಳಲ್ಲಿ ಸಾಕಷ್ಟು ಉನ್ನತವಾದ ಶಿಕ್ಷಣವನ್ನು ಒದಗಿಸಲು ಸಮರ್ಥವಾದ ಅಂತಹ ಎಲ್ಲ ವಿದ್ಯಾಸಂಸ್ಥೆಗಳೂ ಇದರಲ್ಲಿಬರುತ್ತವೆ. ಬೆಂಗಾಲ್‌ನಲ್ಲಿ ಹಿಂದೂ, ಹೂಗ್ಲಿ, ಡಾಕಾ, ಕಿಶ್ನಘರ್ ಮತ್ತು ಬೆರ್ಹಾಮ್‌ಪುರ್ ಸರ್ಕಾರಿ ಆಂಗ್ಲೋ-ವರ್ನಾಕ್ಯುಲರ್ ಕಾಲೇಜುಗಳು, ಸಂಸ್ಕೃತಕಾಲೇಜು, ಮಹಮದೀಯ ಮದ್ರಸಾಗಳು ಮತ್ತು ವೈದ್ಯಕೀಯ ಕಾಲೇಜು; ಬಾಂಬೆಯಲ್ಲಿ ಎಲ್ಫಿನ್‌ಸ್ಟೋನ್ ಇನ್‌ಸ್ಟಿಟ್ಯೂಷನ್, ಪೂನಾ ಕಾಲೇಜ್, ಗ್ರಾಂಟ್ ಮೆಡಿಕಲ್ ಕಾಲೇಜ್; ವಾಯವ್ಯ ಪ್ರಾಂತ್ಯಗಳಲ್ಲಿ ದೆಹಲಿ, ಆಗ್ರಾ, ಬೆನಾರಸ್, ಬರೈಲಿ ಮತ್ತು ಥಾಮ್‌ಸನ್ ಕಾಲೇಜುಗಳು; ಅತ್ಯುನ್ನತ ಶಿಕ್ಷಣವನ್ನು ಪಡೆದ ದೇಶವಾಸಿಗಳು ಸ್ಥಾಪಿಸಿರುವ ಕಲ್ಕತ್ತಾದಲ್ಲಿನ ಓರಿಯೆಂಟಲ್ ಸೆಮಿನರಿಯಂತಹ ಸೆಮಿನರಿಗಳು (ವೃತ್ತಿ ಶಿಕ್ಷಣ ಕಾಲೇಜುಗಳು) - ಇಂತಹ ಶ್ರೇಷ್ಠವಾದ ಶಿಕ್ಷಣ ಸ್ಥಾನಗಳು ಸಂಖ್ಯೆ ಮತ್ತು ಕಾರ್ಯಕ್ಷಮತೆಯಲ್ಲಿ ನಿತ್ಯವೂ ಹೆಚ್ಚಾಗುತ್ತಿವೆ ಎಂದು ತಿಳಿದು ನಮಗೆ ಸಂತೋಷವಾಗಿದೆ. ಈಸ್ಟ್‌ಇಂಡಿಯನ್ಸ್ ನಡೆಸುವ ಪೇರೆಂಟಲ್ ಅಕಾಡೆಮಿ ಅಂತಹ ವಿದ್ಯಾಸಂಸ್ಥೆಗಳು; ಬಿಷಪ್ಸ್ ಕಾಲೇಜ್, ದ ಜನರಲ್ ಅಸೆಂಬ್ಲೀಸ್ ಇನ್‌ಸ್ಟಿಟ್ಯೂಷನ್, ಡಾ.ಡಫ್ಸ್‌ಕಾಲೇಜ್, ಸೆರಾಮ್‌ಪೋರ್‌ನಲ್ಲಿರುವದ ಬ್ಯಾಪ್ಟಿಸ್ಟ್ ಕಾಲೇಜ್ ಮತ್ತು ವಿವಿಧ ಧಾರ್ಮಿಕ ನಿಕಾಯಗಳು ಹಾಗೂ ಮಿಶನರಿ ಸೊಸೈಟಿಗಳ ಮೇಲ್ವಿಚಾರಣೆಯಲ್ಲಿರುವ ಇತರ ಸಂಸ್ಥೆಗಳು ವಿಶ್ವವಿದ್ಯಾಲಯಗಳಿಗೆ ಅಂಗಸಂಸ್ಥೆಗಳಾಗಿ ಸೇರ್ಪಡೆಗೊಳ್ಳಲು ಅರ್ಹವಾದ

ಗಣನೀಯ ಪ್ರಮಾಣದ ವಿದ್ಯಾಸಂಸ್ಥೆಗಳನ್ನು ಒಟ್ಟಿಗೇ ಒದಗಿಸುತ್ತವೆ, ಅಲ್ಲದೇ ಸಾಮಾನ್ಯ ಶಿಕ್ಷಣದ ಗುಣಮಟ್ಟದಲ್ಲಿಅತ್ಯುನ್ನತ ಸ್ಥಾನವನ್ನುಕೂಡತುಂಬುತ್ತವೆ.

38. ಅಂಗೀಭೂತವಾದ ಸಂಸ್ಥೆಗಳಿಗೆ ಸರ್ಕಾರಿ ಪರಿಶೀಲನಾಧಿಕಾರಿಗಳು ಕಾಲಕಾಲಕ್ಕೆ ಭೇಟಿ ನೀಡುತ್ತಾರೆ; ಇಂತಹ ಭೇಟಿಗಳಿಂದ ಅವುಗಳ ನಡುವೆ ಒಂದು ಗೌರವಾನ್ವಿತವಾದ ಪೈಪೋಟಿಯ ಮನೋಭಾವನೆ ಉಂಟಾಗಲು ಪ್ರೋತ್ಸಾಹ ನೀಡಿದಂತಾಗುತ್ತದೆ. ಅವುಗಳ ದಕ್ಷತೆಯು ಉಳಿದುಕೊಂಡು ಬರುತ್ತದೆ. ಹಾಗೆಯೇ ವಿಶ್ವವಿದ್ಯಾಲಯದ ಪದವಿಗಳನ್ನು ಪಡೆಯಲು ಅವುಗಳ ಅತ್ಯಂತ ಬುದ್ಧಿವಂತ ವಿದ್ಯಾರ್ಥಿಗಳ ನಡುವೆ ಸ್ಪರ್ಧೆಯುಂಟಾಗುತ್ತದೆ. ಅವುಗಳಿಗೆ ಹೊಂದಿಕೊಂಡಂತೆ ವಿದ್ಯಾರ್ಥಿ ವೇತನಗಳು ಇರುತ್ತವೆ. ಕೆಳಹಂತದ ಶಾಲೆಗಳ ಅತ್ಯುತ್ತಮ ವಿದ್ಯಾರ್ಥಿಗಳಿಗೆ ಇವುಗಳನ್ನು ನೀಡಲಾಗುತ್ತದೆ; ಮತ್ತುಆಂಗ್ಲೊ-ವರ್ನಾಕ್ಯುಲರ್ ಕಾಲೇಜುಗಳಲ್ಲಿ ಶಿಕ್ಷಣದ ಯೋಜನೆಗಳು ದೇಶೀಯ ಭಾಷೆಗಳನ್ನು ಜಾಗರೂಕತೆಯಿಂದ ಬೆಳೆಸಲು ಅವಕಾಶವನ್ನು ಒದಗಿಸಬೇಕು. ಓರಿಯೆಂಟಲ್ ಕಾಲೇಜುಗಳಲ್ಲಿ ಇಂಗ್ಲಿಷ್ ಮತ್ತು ದೇಶೀಯ ಭಾಷೆಗಳಲ್ಲಿ ಸಾಕಷ್ಟು ಶಿಕ್ಷಣವನ್ನು ನೀಡಲಾಗುತ್ತದೆ. ಐರೋಪ್ಯ ಜ್ಞಾನವನ್ನು ಸಾಮಾನ್ಯವಾಗಿ ಪ್ರಸರಣ ಮಾಡಲು ಅವುಗಳೆರಡರ ಅಧ್ಯಯನವೂ ಅಲ್ಲಿ ಲಭ್ಯವಾಗಿರಬೇಕು. ಇಂಡಿಯಾದಲ್ಲಿ ಶಿಕ್ಷಣವನ್ನು ನೀಡುವ ಮುಖ್ಯ ಉದ್ದೇಶವೇ ಅದು.

39. ಇಲ್ಲಿಯವರೆಗೆ ಸರ್ಕಾರದ ಗಮನವು ಮುಖ್ಯವಾಗಿ ನಿರ್ದೇಶಿತವಾದದ್ದು ಈ ದರ್ಜೆಯ ವಿದ್ಯಾಸಂಸ್ಥೆಗಳ ಮೇಲೆಯೇ. ಅವು ಸಾರ್ವಜನಿಕ ನಿಧಿಗಳ ಬಹುದೊಡ್ಡ ಭಾಗವನ್ನು ಹೀರಿಕೊಳ್ಳುತ್ತಿದ್ದವು. ಅದನ್ನು ಈಗ ಶೈಕ್ಷಣಿಕ ಉದ್ದೇಶಗಳಿಗಾಗಿ ಅನ್ವಯಿಸಲಾಗುತ್ತಿದೆ. ದೇಶವಾಸಿಗಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಐರೋಪ್ಯ ಜ್ಞಾನದ ಪ್ರಸಾರ ಮಾಡಲು ಪೌರಸ್ತ್ಯ ಶಾಸ್ತ್ರೀಯ ಭಾಷೆಗಳು ಮಾಧ್ಯಮವಾಗಬೇಕು ಎಂದು ವಸಾಹತು ಆರಂಭಕಾಲದ ಅಭಿಪ್ರಾಯಗಳು ತಪ್ಪಾಗಿ ತೋರಿಸಿದ್ದವು. ಇದರ ಜೊತೆಗೆ ಅಂದಿನ ಇಂಡಿಯಾದ ಆರ್ಥಿಕ ಪರಿಸ್ಥಿತಿಯಲ್ಲಿ ಸಣ್ಣ ಪ್ರಮಾಣದ ಧನಸಹಾಯ ನಿಮ್ಮ ಹತೋಟಿಯಲ್ಲಿತ್ತು. ಅಂಥ ಅಭಿಪ್ರಾಯಗಳನ್ನು ತಿರಸ್ಕರಿಸುವ ವಿವೇಕಯುತ ನಿರ್ಣಯವನ್ನು ತೆಗೆದುಕೊಂಡ ನಂತರ ಬಹುಮಟ್ಟಿಗೆ ಉನ್ನತ ವರ್ಗಗಳೆಂದು ಕರೆಯಬಹುದಾದವರಲ್ಲಿಯೇ ಒಂದು ಅಲ್ಪಸಂಖ್ಯಾತ ದೇಶವಾಸಿಗಳಿಗೆ ಶಿಕ್ಷಣದಲ್ಲಿ ಅತ್ಯುನ್ನತವಾದ ಪದವಿಯನ್ನು ಒದಗಿಸುವುದಕ್ಕೆ ಸರ್ಕಾರದ ಪ್ರಯತ್ನವು ಸೀಮಿತವಾಯಿತೆಂದು ನಾವು ಭಾವಿಸುತ್ತೇವೆ.

40. ಅಂಥ ವರ್ಗಗಳಿಗೆ ಮುಕ್ತ ಐರೋಪ್ಯ ಶಿಕ್ಷಣವನ್ನು ಪಡೆಯಲು ಪ್ರತಿಯೊಂದು ಅವಕಾಶವನ್ನೂ ಕೊಡಬೇಕು ಎನ್ನುವುದರಲ್ಲಿ ತಪ್ಪಿಲ್ಲ. ಅದರ ಪರಿಣಾಮಗಳು ನಿಧಾನವಾಗಿ ಅವರ ಸಹದೇಶ ವಾಸಿಗಳ ಮೇಲೆ ವ್ಯಾಪಿಸುತ್ತವೆ ಎಂದು ನಿರೀಕ್ಷಿಸಬಹುದು. ಅದು ಕೊನೆಯಲ್ಲಿ ಇಡೀ ದೇಶದ ಶೈಕ್ಷಣಿಕ ಮಟ್ಟವನ್ನೇ ಎತ್ತರಿಸುತ್ತದೆ. ಆದ್ದರಿಂದ ನಾವು ಈ ನಿಟ್ಟಿನಲ್ಲಿ ಮಾಡಲಾದ ಪ್ರಯತ್ನಗಳ ಮಹತ್ತ್ವ ಅಥವಾ ಯಶಸ್ಸನ್ನು ಕಡೆಗಣಿಸುವ ಸ್ಥಿತಿಯಲ್ಲಿಲ್ಲ. ಆದರೆ ಅನೇಕ ಸಂದರ್ಭಗಳಲ್ಲಿ ಉನ್ನತ ವರ್ಗಗಳವರು ತಮ್ಮ ಶಿಕ್ಷಣದ ಕನಿಷ್ಠ ವೆಚ್ಚದ ಗಮನಾರ್ಹ ಭಾಗವನ್ನಾದರೂ ಭರಿಸಲು ಸಮರ್ಥರೂ ಮತ್ತು ಸಮ್ಮತಿಸುವವರೂ ಆಗಿದ್ದಾರೆ. ಅಂತಹ ಶಿಕ್ಷಣಕ್ಕೆ ಬೇಡಿಕೆಯನ್ನು ಸೃಷ್ಟಿಸಲು ಇಂಡಿಯಾದ ಕೆಲವು ಭಾಗಗಳಲ್ಲಿ ಕೃತಕ ಪ್ರಚೋದನೆಯನ್ನು ನೀಡುವ ಅಗತ್ಯ

ಇನ್ನೆಂದಿಗೂ ಇಲ್ಲ ಎನ್ನುವುದು ಸರ್ಕಾರಿ ಆಂಗ್ಲೊ-ವರ್ನಾಕ್ಯುಲರ್ ಕಾಲೇಜುಗಳಿಂದ ನಿದರ್ಶನವಾಗುತ್ತದೆ. ಈ ಕಾಲೇಜುಗಳನ್ನು ಸ್ಥಾಪಿಸಿ ಅವುಗಳಿಗೆ ಬೆಂಬಲ ನೀಡುವ ಮೂಲಕ ಮುಕ್ತವಾದ ಶಿಕ್ಷಣವನ್ನು ಪಡೆಯುವ ವಿಧಾನವನ್ನುಎತ್ತಿ ತೋರಿಸಿದ್ದೇವೆ. ಅವುಗಳಿಗೆ ಸಾರ್ವಜನಿಕ ನಿಧಿಗಳಿಂದ ಬಹಳ ಗಣನೀಯ ಪ್ರಮಾಣದಲ್ಲಿ ನೆರವನ್ನು ನೀಡಿದ್ದೇವೆ. ಇದರ ಜೊತೆಗೆ ನಾವು ಈಗ ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಮಂಜೂರಾತಿಯನ್ನು ನೀಡಲು ಸಿದ್ಧರಾಗಿದ್ದೇವೆ. ಆ ಮೂಲಕ ಇಂಡಿಯಾದ ದೇಶವಾಸಿಗಳು ಅಷ್ಟೇಕೆ ಯಾವುದೇ ದೇಶದ ನಿವಾಸಿಗಳು ಬಯಸುವಂತಹ ಅತ್ಯುನ್ನತ ಶಿಕ್ಷಣ ಕ್ರಮವನ್ನು ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿಪಡಿಸಲು ಉದ್ದೇಶಿಸಿದ್ದೇವೆ. ಅಲ್ಲದೆ ವಿಶ್ವವಿದ್ಯಾಲಯದ ಪದವಿಗಳನ್ನು ಮತ್ತು ವಿಶೇಷತೆಗಳನ್ನು ವಿವಿಧ ಶಾಖೆಗಳಾಗಿ ವಿಭಾಗಿಸಲಾಗಿದೆ. ಆ ಮೂಲಕ ಅತ್ಯುನ್ನತ ಶಿಕ್ಷಣ ಪಡೆದ ಮಹನೀಯರ ಪರಿಶ್ರಮವನ್ನು ಜೀವನದ ವಿವಿಧ ಕ್ರಿಯಾಶೀಲ ವೃತ್ತಿಗಳಲ್ಲಿ ಯಶಸ್ಸನ್ನು ಸಾಧಿಸಲು ಅಗತ್ಯವಾದ ಅಧ್ಯಯನಗಳ ಕಡೆಗೆ ನಿರ್ದೇಶಿಸಲಾಗುತ್ತದೆ. ಆದ್ದರಿಂದ ಇಂಡಿಯಾದಲ್ಲಿ ಅತ್ಯುನ್ನತ ವರ್ಗಗಳ ಮುಂದೆ ಶಿಕ್ಷಣದ ಲಾಭಗಳನ್ನು ಸರಳವಾಗಿ ಮತ್ತು ಪ್ರಾಯೋಗಿಕವಾಗಿ ಇರಿಸಲುಒಂದು ಸರ್ಕಾರವಾಗಿ ನಾವು ಮಾಡಬಹುದಾದದ್ದನ್ನೆಲ್ಲ ಮಾಡಿದಂತೆ ಆಗುತ್ತದೆ.

41. ಸಾಧ್ಯವಾದರೆ, ಇನ್ನೂ ಹೆಚ್ಚು ಮುಖ್ಯವಾದ ಮತ್ತು ಇಲ್ಲಿಯವರೆಗೆ ತೀರ ನಿರ್ಲಕ್ಷ್ಯಕ್ಕೆ ಒಳಗಾಗಿದೆ ಎಂದು ನಾವು ಒಪ್ಪಿಕೊಳ್ಳಬೇಕಾದ ಇನ್ನೊಂದು ಸಂಗತಿಯ ಕಡೆಗೆ ಈಗ ನಮ್ಮ ಗಮನವನ್ನು ಹರಿಸಬೇಕು. ಅದೆಂದರೆ, ಜೀವನದ ಪ್ರತಿಯೊಂದು ಹಂತದಲ್ಲಿಯೂ ಸೂಕ್ತವಾಗಿ ಹೊಂದಿಕೆಯಾಗುವಂತಹ ಜ್ಞಾನವು ಎಷ್ಟು ಉಪಯುಕ್ತ ಮತ್ತು ಪ್ರಾಯೋಗಿಕ ಎನ್ನುವುದನ್ನು ಜನರ ಮಹಾ ಸಮುದಾಯಕ್ಕೆ ತಿಳಿಸುವುದು. ಈ ಜನರು ಅನ್ಯ ಸಹಾಯವಿಲ್ಲದೇ ತಮ್ಮದೇ ಪ್ರಯತ್ನಗಳಿಂದ ಶಿಕ್ಷಣ ಎಂದು ಕರೆಯಲು ಅರ್ಹವಾದ ಏನನ್ನಾದರೂ ಪಡೆಯಲು ತೀರ ಅಸಮರ್ಥರಾಗಿದ್ದಾರೆ. ಭವಿಷ್ಯದಲ್ಲಿ ಈ ಉದ್ದೇಶಕ್ಕಾಗಿ ಸರ್ಕಾರದ ಕ್ರಿಯಾಶೀಲವಾದ ಕ್ರಮಗಳನ್ನು ಹೆಚ್ಚು ವಿಶೇಷವಾಗಿ ಕೇಂದ್ರೀಕರಿಸಲು ನಾವು ಬಯಸುತ್ತೇವೆ. ಇದನ್ನು ಸಾಧಿಸಲು ಹೆಚ್ಚುವರಿ ವೆಚ್ಚವನ್ನು ಮಂಜೂರು ಮಾಡಲು ನಾವು ಸಿದ್ಧವಾಗಿದ್ದೇವೆ.

42. ಶಾಲೆಗಳ ಉದ್ದೇಶವು ಕೆಲವೇ ಯುವ ಜನರಿಗೆ ಅತ್ಯುನ್ನತ ತರಬೇತಿಯನ್ನು ನೀಡುವುದಾಗ ಕೂಡದು. ಈಗ ಅಸ್ತಿತ್ವದಲ್ಲಿರುವುದಕ್ಕಿಂತ ಹೆಚ್ಚು ಪ್ರಯೋಜನಕಾರಿಯಾದ ಶಿಕ್ಷಣವನ್ನು ಗಳಿಸುವ ಅವಕಾಶವನ್ನು ಒದಗಿಸುವಂತಾಗಬೇಕು. ಇಂಡಿಯಾದ ಪ್ರತಿಯೊಂದು ಜಿಲ್ಲೆಯಲ್ಲಿಯೂ ಇರುವ ಪ್ರತಿಯೊಂದು ಜೀವನ ಪರಿಸ್ಥಿತಿಗೂ ಈ ಶಿಕ್ಷಣವನ್ನು ಪಡೆದವರು ಹೆಚ್ಚು ಉಪಯುಕ್ತರಾದ ಸದಸ್ಯರಾಗುವಂತಾಗಬೇಕು. ಈ ಶಾಲೆಗಳನ್ನು ನಿರಂತರವಾಗಿ ಮತ್ತು ಜಾಗರೂಕತೆಯಿಂದ ಪರಿಶೀಲನೆಗೆ ಒಳಪಡಿಸಬೇಕು. ಈ ಶಾಲೆಗಳ ವಿದ್ಯಾರ್ಥಿಗಳಿಗೆ ಇತರ ಸಂಸ್ಥೆಗಳಲ್ಲಿ ಸ್ಥಾಪಿಸಲಾಗಿರುವ ವಿದ್ಯಾರ್ಥಿ ವೇತನಗಳು ದೊರಕುವಂತೆ ಮಾಡುವ ಮೂಲಕ ಉತ್ತೇಜನವನ್ನು ನೀಡಬಹುದು. ಅವರಲ್ಲಿ ಗಣನೀಯ ಸಂಖ್ಯೆಯ ವಿದ್ಯಾರ್ಥಿಗಳ ಅರ್ಹತೆಗೆ ಪುರಸ್ಕಾರ ಸಿಗುವಂತಾಗಬೇಕು.

43. ಬೆಂಗಾಲ್‌ನ ಜಿಲ್ಲಾ ಶಾಲೆಗಳು, ಬಾಂಬೆಯ ಜಿಲ್ಲಾ ಸರ್ಕಾರಿ ಆಂಗ್ಲೊ-ವರ್ನಾಕ್ಯುಲರ್ ಶಾಲೆಗಳು-ಅಂತಹ ಶಾಲೆಗಳು ಮತ್ತು ಇಂಡಿಯಾದ ಇತರ

ಭಾಗಗಳಲ್ಲಿ ಬರ್ದ್ವಾನ್‌ನ ರಾಜ ಮತ್ತು ಇತರ ದೇಶವಾಸಿ ಸಜ್ಜನರು ಸ್ಥಾಪಿಸಿದಂತಹ ಶಾಲೆಗಳ ಈ ದರ್ಜೆಯ ಸಂಸ್ಥೆಗಳಲ್ಲಿ ಇಂಗ್ಲಿಷ್ ಅನ್ನು ಶಿಕ್ಷಣದ ಪ್ರಮುಖ ಮಾಧ್ಯಮವಾಗಿ ಬಳಸಬೇಕೆಂಬುದನ್ನು ನಾವು ಸೇರಿಸಬಯಸುತ್ತೇವೆ. ಅಲ್ಲದೆ ಕೆಳಹಂತದ ಇನ್ನೂ ಕೆಲವು ಶಾಲೆಗಳಿವೆ. ಅವುಗಳೆಂದರೆ ವಾಯವ್ಯ ಪ್ರಾಂತ್ಯಗಳ ತೆಹಸೀಲೀ ಶಾಲೆಗಳು ಮತ್ತು ಬಾಂಬೆ ಪ್ರಾಂತ್ಯದ ಸರ್ಕಾರಿ ವರ್ನಾಕ್ಯುಲರ್ ಶಾಲೆಗಳು. ಹೇಗಾದರೂ, ಎಷ್ಟೇ ಅಪರಿಪೂರ್ಣವಾಗಿ ಕೈಗೊಳ್ಳಲಾಗುತ್ತಿದ್ದರೂ, ಶಿಕ್ಷಣದ ಅತ್ಯುನ್ನತ ಬೇಡಿಕೆಯನ್ನು ಈಡೇರಿಸುವುದು ಅವುಗಳ ಉದ್ದೇಶವಾಗಿದೆ. ಅಲ್ಲಿ ದೇಶೀಯ ಭಾಷೆಗಳ ಮಾಧ್ಯಮದಲ್ಲಿ ಶಿಕ್ಷಣವನ್ನು ನೀಡಬಹುದು.

44. ಆಂಗ್ಲೋ-ವರ್ನಾಕ್ಯುಲರ್ ಮತ್ತು ವರ್ನಾಕ್ಯುಲರ್ ಶಾಲೆಗಳನ್ನು ನಾವು ಒಂದೇ ವರ್ಗದಲ್ಲಿ ಸೇರಿಸುತ್ತೇವೆ. ಶಿಕ್ಷಣದ ಮಾಧ್ಯಮವು ಬೇರೆಯಾಗಿರುವಂತಹ ಶಾಲೆಗಳ ನಡುವೆ ಪ್ರಸ್ತುತ ಇರುವಂತಹ ಪ್ರತ್ಯೇಕತೆಯ ಗಡಿರೇಖೆಯನ್ನು ಉಳಿಸಿಕೊಳ್ಳಲು ನಾವು ಇಷ್ಟಪಡುವುದಿಲ್ಲ. ಪ್ರಸ್ತುತ, ವರ್ನಾಕ್ಯುಲರ್ ಶಾಲೆಗಳಿಗಿಂತ ಆಂಗ್ಲೋ-ವರ್ನಾಕ್ಯುಲರ್ ಶಾಲೆಗಳಲ್ಲಿ ನೀಡಲಾಗುತ್ತಿರುವ ಜ್ಞಾನವು ತೀರ ಉನ್ನತಮಟ್ಟದಲ್ಲಿದೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಶಿಕ್ಷಣಕ್ಕೆ ಸಂಬಂಧಪಟ್ಟ ಕೃತಿಗಳು ಕ್ರಮೇಣ ದೇಶೀಯ ಭಾಷೆಗಳನ್ನು ಶ್ರೀಮಂತಗೊಳಿಸಿದಂತೆ ವರ್ನಾಕ್ಯುಲರ್ ಶಾಲೆಗಳು ಹೆಚ್ಚು ದಕ್ಷವಾದಾಗ ಅವುಗಳ ಅಧ್ಯಯನದ ಯೋಜನೆಗಳು ವಿಸ್ತಾರಗೊಂಡು ಅಂತರವು ಕಡಮೆಯಾಗುತ್ತಾ ಹೋಗುತ್ತದೆ. ಮತ್ತು ಶಾಲಾ ಉಪಾಧ್ಯಾಯರ ವರ್ಗಗಳು ಹೆಚ್ಚಳಗೊಂಡಂತೆ ಅವರು ಮೇಲ್ದರ್ಜೆಯ ಶಿಕ್ಷಣವನ್ನು ನೀಡಲು ಸಮರ್ಥರಾಗುತ್ತಾರೆ.

45. ಈ ಶಾಲೆಗಳಲ್ಲಿ ನಮ್ಮ ದೃಷ್ಟಿಕೋನಗಳನ್ನು ಸಂಪೂರ್ಣವಾಗಿ ಮತ್ತು ಸಮರ್ಥವಾಗಿ ಅನುಷ್ಠಾನಕ್ಕೆ ತರಬೇಕೆಂದರೆ, ಅವುಗಳ ಉಪಾಧ್ಯಾಯರು ಇಂಗ್ಲಿಷ್ ಜ್ಞಾನವನ್ನು ಹೊಂದಿರಬೇಕಾದದ್ದು ಅನಿವಾರ್ಯವಾಗಿದೆ. ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಜ್ಞಾನವನ್ನು ಸಿದ್ಧವಾದ ರೂಪದಲ್ಲಿಕೊಡಲು ದೇಶೀಯ ಭಾಷೆಗಳನ್ನೂ ಅವರು ತಿಳಿದಿರಬೇಕು. ಆದರೆ ಹಾಗೆ ಅರ್ಹತೆಯನ್ನು ಗಳಿಸಿದ ಸಾಕಷ್ಟು ಸಂಖ್ಯೆಯ ವ್ಯಕ್ತಿಗಳ ಸೇವೆಯನ್ನು ಪಡೆಯುವುದು ಅಸಾಧ್ಯ ಎಂಬ ಅರಿವು ನಮಗಿದೆ. ಅಂತಹ ವರ್ಗದವರನ್ನು ಕ್ರಮೇಣ ಕಲೆ ಹಾಕಬೇಕು ಮತ್ತು ನಾವು ಇನ್ನು ಮುಂದೆ ಹೇಗೆ ಇರಬೇಕೆಂದು ಬಯಸುತ್ತೇವೆಯೋ ಆ ರೀತಿಯಲ್ಲಿ ತರಬೇತಿಯನ್ನು ಕೊಡಬೇಕು .ಈ ಮಧ್ಯೆ ನಿಮ್ಮ ಹತೋಟಿಯಲ್ಲಿರುವ ಸಾಧನಗಳನ್ನು ನೀವು ಸಾಧ್ಯವಾದಷ್ಟು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು.

46. ಕೊನೆಯದಾಗಿ, ಯಾವ ಶಾಲೆಗಳನ್ನು ದೇಶೀಯ ಶಾಲೆಗಳೆಂದು ಕರೆಯಲಾಗುತ್ತಿದೆಯೋ ಅವುಗಳಿಗೆ, ವಾಯವ್ಯ ಪ್ರಾಂತ್ಯಗಳಲ್ಲಿ ಮಿ. ಥಾಮ್ಸನ್ ವ್ಯವಸ್ಥೆಗೊಳಿಸಿದ ವ್ಯವಸ್ಥೆಯ ಅಡಿಯಲ್ಲಿ ಮತ್ತು ಮಿ. ಎಚ್.ಎಸ್. ರೀಡ್ ಅವರ ದಕ್ಷ ನಿರ್ದೇಶನದಲ್ಲಿ ಅಸಾಧಾರಣವಾದ ಪ್ರಾಯೋಗಿಕ ರೀತಿಯಲ್ಲಿಎಂಟು ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸುತ್ತಿರುವಂತಹ ರೀತಿಯಲ್ಲಿ ವಿವೇಕಯುತವಾದ ಉತ್ತೇಜನವನ್ನು ಕೊಡುವ ಮೂಲಕ ತೃಪ್ತಿಕರವಾದ ಫಲಿತಾಂಶಗಳನ್ನು ಪಡೆಯುವ ಭರವಸೆಯನ್ನು ತಾಳಬಹುದು. ಜನರ ಮಹಾ ಸಮುದಾಯಕ್ಕೆ ಸರಿಯಾದ ಪ್ರಾಥಮಿಕ ಜ್ಞಾನವನ್ನು ನೀಡಲು ಸಮರ್ಥವನ್ನಾಗಿ ಮಾಡಬಹುದು.

ಈ ಶಾಲೆಗಳ ಅತ್ಯಂತ ಭರವಸೆ ಮೂಡಿಸುವ ವಿದ್ಯಾರ್ಥಿಗಳಿಗೆ ಉನ್ನತ ಶ್ರೇಣಿಯ ಶಿಕ್ಷಣವನ್ನು ಕೊಡುವಂತಹ ಸ್ಥಳಗಳಿಗೆ ಹೋಗಲು ವಿದ್ಯಾರ್ಥಿವೇತನವನ್ನು ನೀಡಬಹುದು.

47. ಇಂತಹ ಒಂದು ವ್ಯವಸ್ಥೆಯು ದಕ್ಷ ಪರಿಶೀಲನೆಯ ಅಡಿಯಲ್ಲಿ ಎಲ್ಲಾ ಪದವಿಗಳನ್ನೂ ತರುವ ಪ್ರಾಥಮಿಕ ಹಂತದ ವಿನಮ್ರ ಶಿಕ್ಷಣದಿಂದ ಪ್ರಾರಂಭಿಸಿ, ವಿಶ್ವವಿದ್ಯಾಲಯದ ಮುಕ್ತ ಶಿಕ್ಷಣದ ಪರೀಕ್ಷೆಯಲ್ಲಿ ಕೊನೆಗೊಳ್ಳುವವರೆಗೆ ಶಾಲೆಗಳ ಪ್ರತಿ ತರಗತಿಯಲ್ಲೂ ಅತ್ಯುತ್ತಮ ವಿದ್ಯಾರ್ಥಿಗಳಿಗೆ ಅರ್ಹತೆಯ ಪುರಸ್ಕಾರವಾಗಿ ನಾವು ವಿವರಿಸಲಿರುವ ವಿದ್ಯಾರ್ಥಿ ವೇತನದ ರೂಪದಲ್ಲಿ ನೆರವನ್ನು ನೀಡುವ ಮೂಲಕ ಉನ್ನತ ಶಿಕ್ಷಣವನ್ನು ಪಡೆಯಲು ಪ್ರೋತ್ಸಾಹಿಸಲಾಗುತ್ತದೆ. ಈ ವಿಧಾನವು, ಇಂಡಿಯಾದ ಶಿಕ್ಷಣಕ್ಕೆ ಜೀವಕಳೆ ಮತ್ತು ಚೈತನ್ಯವನ್ನು ತುಂಬುತ್ತದೆ ಮತ್ತು ಅದರ ಪ್ರಯೋಜನಗಳನ್ನು ಜನಸಮುದಾಯದ ಎಲ್ಲ ವರ್ಗಗಳವರಿಗೆ ಏಕಪ್ರಕಾರವಾಗಿ ವಿಸ್ತರಿಸುತ್ತದೆ ಎಂದು ನಾವು ದೃಢವಾಗಿ ನಂಬಿದ್ದೇವೆ.

48. ಬ್ರಿಟಿಷ್ ಇಂಡಿಯಾದ ಅಪಾರ ಜನಸ್ತೋಮವನ್ನು ನಾವು ಪರಿಗಣಿಸಿದಾಗ, ಮತ್ತು ಶೈಕ್ಷಣಿಕ ಉದ್ದೇಶಗಳಿಗಾಗಿ ನಾವು ಈಗ ವೆಚ್ಚ ಮಾಡುತ್ತಿರುವ ನಿಧಿಗಳನ್ನು ಪರಿಗಣಿಸಿದಾಗ, ಅವು ತಮ್ಮಷ್ಟಕ್ಕೆ ತಕ್ಕಮಟ್ಟಿಗೆ ಯಶಸ್ವಿಯಾಗಿದ್ದರೂ, ಶಾಲಾ ಶಿಕ್ಷಣವನ್ನು ಪಡೆಯಲು ಪ್ರಾಪ್ತ ವಯಸ್ಸನ್ನು ತಲಪಿದ ಒಟ್ಟೂ ಮಕ್ಕಳಲ್ಲಿ ಅತ್ಯಲ್ಪ ಸಂಖ್ಯೆಯನ್ನಷ್ಟೇ ತಲಪಿವೆ. ಸಂಪೂರ್ಣವಾಗಿ ಸರ್ಕಾರದ ವೆಚ್ಚದಿಂದಲೇ ಬೆಂಬಲಿತವಾದ ಶಾಲಾ ಕಾಲೇಜುಗಳ ಮೂಲಕ ಪ್ರಸ್ತುತ ಶಿಕ್ಷಣ ವ್ಯವಸ್ಥೆಯನ್ನು ವಿಸ್ತರಿಸುವ ಕಾರ್ಯದಲ್ಲಿ ಅನಿವಾರ್ಯವಾಗಬಹುದಾದ ಕಷ್ಟಗಳು ನಮ್ಮ ಮೇಲೆ ಪರಿಣಾಮ ಬೀರದೆ ಇರಲಾರವು. ನಾವು ವಿವರಿಸಿದ ಮತ್ತು ಸ್ಥಾಪಿಸಬೇಕೆಂದು ಅಪೇಕ್ಷಿಸಿದ ವ್ಯವಸ್ಥೆಯನ್ನು ತನ್ನ ಕಾಲಮೇಲೆ ತಾನು ನಿಲ್ಲುವಂತೆ ಮಾಡುವ ನಿಟ್ಟಿನಲ್ಲಿ ಎದುರಾಗಬಹುದಾದ ಅಂತಹ ಬೃಹತ್ ಕೊರತೆಯನ್ನು ನಿರೀಕ್ಷಿತ ಸಮಯದೊಳಗೆ ತುಂಬಬಹುದೆಂಬ ಹಾಗೂ ಸೂಕ್ತವಾದ ಸಾಧನಗಳನ್ನು ಒದಗಿಸಬಹುದೆಂಬ ಭರವಸೆಯನ್ನೂ ತಾಳುವಂತಿಲ್ಲ.

49. ನಾವು ಸರ್ಕಾರದ ನೇರ ಪ್ರಯತ್ನಗಳ ಮೇಲೆಯೇ ಸಂಪೂರ್ಣವಾಗಿ ಅವಲಂಬಿಸಬೇಕಾದ ಆವಶ್ಯಕತೆಯೂ ಇಲ್ಲ. ಐರೋಪ್ಯ ನಾಗರಿಕತೆಯ ಮಹಾನ್ ಕೇಂದ್ರದ ನೆರೆಹೊರೆಯಲ್ಲಷ್ಟೇ ಅಲ್ಲದೆ ದೂರದ ಜಿಲ್ಲೆಗಳಲ್ಲೂ ಉತ್ತಮ ಶಿಕ್ಷಣವನ್ನು ಪಡೆಯುವ ಸಾಧನಗಳ ಬಗೆಗೆ ದೇಶವಾಸಿಗಳ ಸಮುದಾಯದಲ್ಲಿ ಆಸಕ್ತಿಯು ಹೆಚ್ಚುತ್ತಿರುವುದನ್ನು ಗುರುತಿಸಿ ನಮಗೆ ಸಂತೋಷವಾಗಿದೆ. ಈ ವಿಚಾರವಾಗಿ ಅವರಿಗಿರುವ ಕಾತರವನ್ನು ತೋರಿಸುವ ಪ್ರಾಯೋಗಿ ಕರುಜುವಾತನ್ನು ನೀಡಲುಅವರು ಸಿದ್ಧವಾಗಿದ್ದಾರೆ ಎನ್ನುವುದಕ್ಕೆ ಅನೇಕ ಸಂದರ್ಭಗಳಲ್ಲಿ ನಮಗೆ ಸಾಕ್ಷ್ಯಗಳು ದೊರಕಿವೆ. ಉದಾರವಾದ ಧನ ಸಹಾಯವನ್ನು ನೀಡಲುಅವರು ಮುಂದೆ ಬಂದಿದ್ದಾರೆ. ಎಲ್ಲ ಯುಗಗಳಲ್ಲೂ ವಿದ್ವಾಂಸರಾದ ಹಿಂದೂಗಳು ಮತ್ತು ಮಹಮದೀಯರು ಅಲ್ಪಜೀವನೋಪಾಯದ ವಿನಾ ಇತರ ಸಂಭಾವನೆಯಿಲ್ಲದೆ ಬೋಧನೆಗೆ ತಮ್ಮನ್ನೇ ಮುಡಿಪಾಗಿಟ್ಟುಕೊಂಡಿದ್ದಾರೆ. ಶಿಕ್ಷಣ ಸಂಸ್ಥೆಗಳಿಗೆ ಶಾಶ್ವತದತ್ತಿಯಾಗಿ ಧಾರಾಳವಾದ ದಾನಗಳನ್ನು ಪದೇಪದೇ ಮಾಡಲಾಗುತ್ತಿರಲಿಲ್ಲ.

50. ಅದೇ ಸಮಯದಲ್ಲಿ ರಿಲಿಜನ್ನಿನ ಸತ್ಯವನ್ನು ಕುರಿತು ಇಂಡಿಯಾದ ದೇಶವಾಸಿಗಳಿಗೆ ಮಾರ್ಗದರ್ಶನ ನೀಡುವ ಸಲುವಾಗಿ ಚರ್ಚಿನ ಎಲ್ಲ ಧಾರ್ಮಿಕ ಪಂಥಗಳ ಕ್ರೈಸ್ತ ಸಂಘಗಳ ಉದಾತ್ತ ಪರಿಶ್ರಮವು ಉಲ್ಲೇಖಾರ್ಹ ಅವರು ತಮ್ಮ ಶೈಕ್ಷಣಿಕ ಸಂಸ್ಥೆಗಳಲ್ಲಿ ಅಸ್ಸಾಮ್, ಕೋಸ್ಯಾ, ಗ್ಯಾರೋ ಮತ್ತು ರಾಜಮಹಲ್ ಗುಡ್ಡಗಾಡು ಪ್ರದೇಶಗಳಲ್ಲಿ ಹಾಗೂ ಮಧ್ಯ ಮತ್ತು ದಕ್ಷಿಣ ಇಂಡಿಯಾದ ವಿವಿಧ ಜಿಲ್ಲೆಗಳಲ್ಲಿ ಕಂಡುಬರುವ ಅನಾಗರಿಕ ಜನಾಂಗಗಳಿಗೆ (ಅವರು ಅಜ್ಞಾನದ ಅಧಃಪಾತಾಳದಲ್ಲಿದ್ದವರು ಮತ್ತು ಯಾವುದೇ ರಿಲಿಜನ್ನಿಗೆ ಸಂಪೂರ್ಣವಾಗಿ ಸೇರಿಲ್ಲದವರು. ಅಥವಾ ಅವಮಾನಕರವಾದ ಮತ್ತು ಅನಾಗರಿಕವಾದ ಮೂಢನಂಬಿಕೆಗಳ ಅಡಿಯಾಳಾಗಿರುವವರು),ಸುಧಾರಿತ ಜ್ಞಾನವನ್ನು ಹರಡುತ್ತ ನಾವು ನೀಡಲು ಉದ್ದೇಶಿಸಿರುವ ಶಿಕ್ಷಣವನ್ನು ಪ್ರಸಾರ ಮಾಡಲುಅಪಾರವಾಗಿ ಕೊಡುಗೆ ನೀಡಿದ್ದಾರೆ.

51. ಇಂಡಿಯಾದ ದೇಶವಾಸಿಗಳಿಗೆ ಶಿಕ್ಷಣವನ್ನು ನೀಡಲು ಸೂಕ್ತವಾದ ಸಾಧನಗಳನ್ನು ಒದಗಿಸುವ ಕೆಲಸವನ್ನು ಸರ್ಕಾರವೊಂದೇ ಮಾಡುವುದು ಅಸಾಧ್ಯ. ಮತ್ತು ಇಲ್ಲಿಯವರೆಗೆ ಪ್ರಭುತ್ವದಿಂದ ಅಷ್ಟಾಗಿ ಪ್ರೋತ್ಸಾಹ ಪಡೆಯದ ಪ್ರಯತ್ನಗಳಿಂದ ಸಹಾಯವನ್ನು ಪಡೆಯಬಹುದು. ಇವನ್ನು ಪರಿಗಣಿಸಿ ಈ ನಿಟ್ಟಿನಲ್ಲಿ ನಾವು ಒಂದು ಸಹಜವಾದ ನಿರ್ಣಯಕ್ಕೆ ಬರಬಹುದು. ಅದೇನೆಂದರೆ ಇಂಡಿಯಾದ ಅಗತ್ಯಗಳನ್ನು ಪೂರೈಸುವಅತ್ಯಂತ ಪರಿಣಾಮಕಾರಿಯಾದ ವಿಧಾನವೆಂದರೆ ಸರ್ಕಾರದ ಮಧ್ಯವರ್ತಿಗಳ ಜೊತೆಗೆ ಸೇವಾಸಂಸ್ಥೆಗಳು ಹಾಗೂ ಸುಶಿಕ್ಷಿತ ಮತ್ತು ಶ್ರೀಮಂತ ದೇಶವಾಸಿಗಳು ಮತ್ತು ಇತರ ಉದಾರಿಗಳ ಪರಿಶ್ರಮ ಮತ್ತು ಔದಾರ್ಯದಿಂದ ಲಭ್ಯವಾಗುವ ಸಹಾಯವನ್ನು ಜೋಡಿಸುವುದು.

52. ಆದ್ದರಿಂದ ನಾವು ಇಂಡಿಯಾದಲ್ಲಿ ಅನುದಾನ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲು ನಿರ್ಧರಿಸಿದ್ದೇವೆ. ಅದನ್ನು ಈ ದೇಶದಲ್ಲಿ ಅದ್ಭುತವಾದ ಯಶಸ್ಸಿನೊಡನೆ ನಿರ್ವಹಿಸಲಾಗಿದೆ. ರಾಜ್ಯದ ಕೊಡುಗೆಯ ಜೊತೆಯಲ್ಲಿ ಸ್ಥಳೀಯ ಸಂಪನ್ಮೂಲಗಳಿಂದ ಬೆಂಬಲವನ್ನು ಪಡೆದುಕೊಂಡು ಕ್ಷಿಪ್ರವಾಗಿ ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಬೇಕು ಎಂದು ನಾವು ಆತ್ಮವಿಶ್ವಾಸದಿಂದ ನಿರೀಕ್ಷಿಸುತ್ತೇವೆ. ಸರ್ಕಾರದ ವೆಚ್ಚದಲ್ಲಿ ಹೆಚ್ಚಳ ಮಾಡುವಷ್ಟರಿಂದಲೇ ಇದನ್ನು ಸಾಧಿಸಲಾಗುವುದಿಲ್ಲ. ಜೊತೆಗೆ ಸ್ಥಳೀಯ ಪರಿಶ್ರಮಗಳ ಮೇಲೆ ಅವಲಂಬಿಸುವ ಮನೋಭಾವ ಹಾಗೂ ಸ್ಥಳೀಯ ಉದ್ದೇಶಗಳಿಗಾಗಿ ಸಂಯೋಜನೆ ಹೊಂದುವ ಮನೋಭಾವವನ್ನು ಪೋಷಿಸುವ ಕೆಲಸವನ್ನೂ ಅದು ಮಾಡುತ್ತದೆ. ದೇಶದ ಯೋಗಕ್ಷೇಮಕ್ಕೆ ಇದೇನೂ ಕಡಮೆ ಮಹತ್ತ್ವದ ಸಂಗತಿಯೇನಲ್ಲ.

53. ಇಂಡಿಯಾದಲ್ಲಿ ನಾವು ಸ್ಥಾಪಿಸಲು ಉದ್ದೇಶಿಸಿರುವ ಅನುದಾನ ವ್ಯವಸ್ಥೆಯು ಅನುದಾನಿತ ಶಾಲೆಗಳ ರಿಲಿಜನ್ನಿನ ಶಿಕ್ಷಣದಲ್ಲಿ. ಯಾವುದೇ ರೀತಿಯ ಹಸ್ತಕ್ಷೇಪವನ್ನೂ ನಿಗ್ರಹಿಸುತ್ತದೆ ಉತ್ತಮ ಸೆಕ್ಯುಲರ್ ಶಿಕ್ಷಣವನ್ನು ನೀಡುತ್ತಿರುವ ಎಲ್ಲ ಶಾಲೆಗಳಿಗೆ ನೆರವನ್ನು ನೀಡಲಾಗುತ್ತದೆ. (ಬೇರೆ ಜಿಲ್ಲೆಗಳಿಗೆ ಹೋಲಿಸಿದರೆ ಪ್ರತಿಜಿಲ್ಲೆಗೂ ಇರುವ ಅಗತ್ಯವನ್ನು ಆಧರಿಸಿ, ಮತ್ತು ಸರ್ಕಾರದ ಬಳಿ ಇರುವ ನಿಧಿಯನ್ನು ಅವಲಂಬಿಸಿ ನೆರವನ್ನುಕೊಡಲು ಸಾಧ್ಯವಾಗುತ್ತದೆ). ನಿಬಂಧನೆ ಏನೆಂದರೆ ಅವು ಸೂಕ್ತವಾದ ಸ್ಥಳೀಯ ನಿರ್ವಹಣಾ ವ್ಯವಸ್ಥೆಯ ಅಡಿಯಲ್ಲಿರಬೇಕು (`ಸ್ಥಳೀಯ ನಿರ್ವಹಣಾ ವ್ಯವಸ್ಥೆ' ಎಂದರೆ ನಮ್ಮ ತಿಳಿವಳಿಕೆ ಏನೆಂದರೆ ಖಾಸಗಿ ಪೋಷಕರು, ಸ್ವಯಂ ಪ್ರೇರಣೆಯ ಕೊಡುಗೈ ದಾನಿಗಳು

ಅಥವಾ ದತ್ತಿನಿಧಿಯ ಸದಸ್ಯರು ಒಬ್ಬರು ಅಥವಾ ಹೆಚ್ಚಿನ ಸಂಖ್ಯೆಯಲ್ಲಿರಬೇಕು. ಅವರು ಶಾಲೆಯ ಸಾಮಾನ್ಯ ಉಸ್ತುವಾರಿಯನ್ನು ವಹಿಸಿಕೊಳ್ಳುವವರಾಗಿರಬೇಕು ಮತ್ತುಒಂದು ನಿರ್ದಿಷ್ಟವಾದ ಸಮಯದವರೆಗಾದರೂ ಅದು ಸ್ಥಿರವಾಗಿ ಇರುವುದಕ್ಕೆ ಜವಾಬ್ದಾರರಾಗಿರಬೇಕು). ಶಾಲೆಗಳು ಸರ್ಕಾರದ ಪರಿಶೀಲನೆಗೆ ಒಳಪಡುವುದಕ್ಕೆ ಅವುಗಳ ನಿರ್ವಾಹಕರು ಒಪ್ಪಬೇಕು ಮತ್ತು ಅಂತಹ ಅನುದಾನಗಳನ್ನು ಅನುಕ್ರಮವಾಗಿ ಕೊಡಲು ನಿಗದಿಪಡಿಸಲಾಗುವ ಷರತ್ತುಗಳಿಗೆ ಅವರು ಸಮ್ಮತಿಸಬೇಕು.

54. ಈ ದೇಶದಲ್ಲಿ ಮತ್ತು ಇತರ ದೇಶಗಳಲ್ಲಿ ಅನುಭವದಿಂದ ಕಂಡುಕೊಂಡ ಸಂಗತಿ ಏನೆಂದರೆ, ಸಂಪೂರ್ಣವಾಗಿ ಮುಫತ್ತಾಗಿ ಪಡೆದ ಶಿಕ್ಷಣವು ಅದನ್ನು ಪಡೆದವರ ಪಾಲಿಗೆ ಬೆಲೆಯುಳ್ಳದ್ದಾಗಿರುವುದಿಲ್ಲ. ಆದರೆಎಷ್ಟೇ ಸಣ್ಣ ಮೊತ್ತವನ್ನಾಗಲಿ ಶುಲ್ಕದರೂಪದಲ್ಲಿ ನೀಡಿದಂತಹ ಪ್ರಸಂಗದಲ್ಲಿ ಈ ಪಾವತಿಯು ಹಾಜರಾತಿಯನ್ನು ಹೆಚ್ಚು ಸಕ್ರಮಗೊಳಿಸುತ್ತದೆ ಮತ್ತು ವಿದ್ಯಾರ್ಥಿಗಳು ವಿದ್ಯೆಯನ್ನುಕಲಿಯಲು ಹೆಚ್ಚು ಪರಿಶ್ರಮಪಡುತ್ತಾರೆ. ಮತ್ತುಪ್ರತಿ ವಿದ್ಯಾರ್ಥಿಗೂಶಾಲೆಯ ಶುಲ್ಕಗಳೇ ನಗಣ್ಯವಾಗಿರುತ್ತವೆ. ಈ ಎಲ್ಲ ಕಾರಣಗಳಿಂದಾಗಿ ಉತ್ತಮ ಶ್ರೇಣಿಯ ಉಪಾಧ್ಯಾಯರಿಂದ ಬೆಂಬಲಿತವಾದ ಇಂತಹ ಶಾಲೆಗಳು ಬಹಳ ಗಣನೀಯ ಮಹತ್ತ್ವಕ್ಕೆ ಪಾತ್ರವಾಗುತ್ತವೆ; ತತ್ತ್ವಶಃ ಅಂತಹ ಶಾಲೆಗಳಿಗೆ ಮಾತ್ರ ಅನುದಾನವನ್ನು ಕೊಡಬೇಕೆಂದು ನಾವು ಬಯಸುತ್ತೇವೆ (ಸಹಜ ಸ್ಥಿತಿಯ ಶಾಲೆಗಳನ್ನು ಹೊರತುಪಡಿಸಿ). ಅವು ಎಷ್ಟೇ ಅಲ್ಪವಾಗಿರಲಿ, ಅವು ವಿದ್ಯಾರ್ಥಿಗಳಿಂದ ಶುಲ್ಕವನ್ನು ಸಂಗ್ರಹಿಸುತ್ತವೆ.

55. ಅನುದಾನಗಳ ನಿರ್ವಹಣೆಯಲ್ಲಿ ನಿಯಮಗಳನ್ನು ರೂಪಿಸುವಾಗ ಜಾಗರೂಕತೆಯ ಪರಿಗಣನೆಗಳು ಅಗತ್ಯ. ಪರಿಷತ್ತಿನ ಸಮಿತಿಯ ಸ್ಪಷ್ಟ ಅನುಕೂಲತೆಗಾಗಿ ಇಲ್ಲಿ ಅಳವಡಿಸಿಕೊಂಡಿರುವ ವಿಧಾನವನ್ನೇ ಇಂಡಿಯಾದಲ್ಲೂ ಅಳವಡಿಸಿಕೊಳ್ಳಬೇಕು. ಅದೆಂದರೆ ನಿರ್ದಿಷ್ಟವಾದ ಉದ್ದೇಶಗಳಿಗೆ ಸೂಕ್ತವಾದ ಅನುದಾನಗಳನ್ನು ನೀಡಬೇಕು (ಪ್ರಾಯಃ ಸಹಜ ಸ್ಥಿತಿಯ ಶಾಲೆಗಳನ್ನು ಹೊರತುಪಡಿಸಿ). ಒಂದು ಶಾಲೆಯ ಸಾಮಾನ್ಯ ವೆಚ್ಚಗಳಿಗೆ ಸರಳವಾದ ಕೊಡುಗೆಯ ರೂಪದ ಅನುದಾನವನ್ನು ನೀಡಬಾರದು. ಮುಖ್ಯೋಪಾಧ್ಯಾಯರ ಸಂಬಳಗಳನ್ನು ಹೆಚ್ಚಿಸುವುದು ಮತ್ತು ಕಿರಿಯ ಉಪಾಧ್ಯಾಯರನ್ನು ಒದಗಿಸುವುದು, ನಮ್ಮಲ್ಲಿರುವಂತೆ ಪ್ರಾಯಃ ಇಂಡಿಯಾದಲ್ಲೂ ಇದೆ. ಸಾಧಾರಣವಾಗಿ ಅನುದಾನಗಳನ್ನು ವಿನಿಯೋಗಿಸಲು ಇವು ಅತ್ಯಂತ ಮುಖ್ಯವಾದ ಸಂಗತಿಗಳಾಗಿರುತ್ತವೆ. ಕೆಳಹಂತದ ಶಾಲೆಗಳಿಂದ ಹಿಡಿದು ಅಭ್ಯರ್ಥಿಗಳಿಗೆ ವಿದ್ಯಾರ್ಥಿವೇತನಗಳನ್ನು ಸ್ಥಾಪಿಸುವುದು ಅಥವಾ ಸ್ಥಾಪಿಸುವುದಕ್ಕೆ ನೆರವಾಗುವುದು ಅನುದಾನವನ್ನು ಅನ್ವಯಿಸುವುದಕ್ಕೆ ಯೋಗ್ಯವಾದ ವಿಷಯವಾಗಿದೆ. ಮತ್ತೆ, ಕೆಲವು ಪ್ರಸಂಗಗಳಲ್ಲಿ ಒಂದು ಶಾಲೆಯನ್ನು ನಿರ್ಮಿಸುವುದು ಅಥವಾ ದುರಸ್ತಿ ಮಾಡುವುದು ಅಥವಾ ಸಾಕಷ್ಟು ಸಂಖ್ಯೆಯ ಪಠ್ಯಪುಸ್ತಕಗಳನ್ನು ಸರಬರಾಜು ಮಾಡುವುದು ಅಗತ್ಯವಾಗಿರಬಹುದು. ಆದರೆ ಪ್ರತಿಯೊಂದು ಪ್ರಕರಣದಲ್ಲಿಯೂ ಪ್ರತಿ ಶಾಲೆ ಮತ್ತು ಜಿಲ್ಲೆಯ ನಿರ್ದಿಷ್ಟ ಸನ್ನಿವೇಶಗಳಿಗೆ ಅನುಗುಣವಾಗಿ ಅನುದಾನದ ವಿನಿಯೋಗವನ್ನು ನಿಯಂತ್ರಿಸಬೇಕು.

56. ನೀಡಲಾಗುವ ನೆರವಿನ ಮೊತ್ತ ಮತ್ತುಅದರ ಮುಂದುವರಿಕೆಯು ಪರಿಶೀಲಕರು (ಇನ್‌ಸ್ಪೆಕ್ಟರ್) ಕಾಲಕಾಲಕ್ಕೆ ನೀಡುವ ವರದಿಗಳ ಮೇಲೆ ಅವಲಂಬಿಸಿರುತ್ತದೆ. ಅವರನ್ನು ಆಯ್ಕೆ ಮಾಡುವಾಗ ದೇಶೀಯ ಸಮುದಾಯಗಳಿಗೆ ಅವರ ಬಗೆಗಿರುವ ವಿಶ್ವಾಸಕ್ಕೆ ವಿಶೇಷ ಒತ್ತುಕೊಡಲಾಗುವುದು. ಕಾಲಕಾಲಕ್ಕೆ ಅವರು ನಡೆಸುವ ಪರಿಶೀಲನೆಗಳಲ್ಲಿ ಯಾವುದೇ ಶಾಲೆಯಲ್ಲಿ ಬೋಧಿಸುವ ರಿಲಿಜನ್ನಿನ ಡಾಕ್ಟ್ರಿನ್ನುಗಳನ್ನು ಕುರಿತು ಅವರು ಯಾವುದೇ ರೀತಿಯ ಗಮನ ಕೊಡಕೂಡದು. ಅಲ್ಲಿ ನೀಡಲಾಗುತ್ತಿರುವ ಸೆಕ್ಯುಲರ್ ಜ್ಞಾನವು ಮೊತ್ತವನ್ನು ವಿತರಣೆ ಮಾಡಲು ಪರಿಗಣಿಸುವುದಕ್ಕೆ ಅರ್ಹವಾಗಿದೆಯೇ ಎನ್ನುವುದನ್ನು ಖಚಿತಪಡಿಸಿಕೊಳ್ಳುವುದಕ್ಕಷ್ಟೆ ಕಟ್ಟುನಿಟ್ಟಾಗಿ ಸೀಮಿತವಾಗಿರಬೇಕು. ಎಲ್ಲೆಲ್ಲಿ ಅವರಿಗೆ ಅವಕಾಶಗಳು ದೊರೆಯಬಹುದೋ ಅಲ್ಲಿ ಶಾಲೆಗಳನ್ನು ಸ್ಥಾಪಿಸಲು ತಮ್ಮ ಸಲಹೆಯ ಮೂಲಕ ನೆರವು ನೀಡಬೇಕು.

57. ನಾವು ರೂಪಿಸಿದ ಅನುದಾನವನ್ನು ಪ್ರಾಯೋಗಿಕವಾಗಿವಿವಿಧ ಪ್ರಾಂತ್ಯಗಳ ಶಿಕ್ಷಣ ಇಲಾಖೆಗಳಿಗೆ ಅನ್ವಯಿಸುವುದಕ್ಕೆ ಸಂಬಂಧಿಸಿದಂತೆ ಸಾಮಾನ್ಯ ನಿಯಮಗಳನ್ನು ಕುರಿತು ನಿಮ್ಮ ವಿವೇಚನೆಗಾಗಿ ಕಿವಿಮಾತು ಹೇಳುತ್ತಿದ್ದೇವೆ. ನಮ್ಮ ಅಭಿಪ್ರಾಯಗಳನ್ನು ಅನುಷ್ಠಾನಕ್ಕೆ ತರುವಾಗ ಎಲ್ಲ ಶಾಲೆಗಳಿಗೆ ಮತ್ತು ಸಂಸ್ಥೆಗಳಿಗೆ, ಅವು ಹೆಣ್ಣುಮಕ್ಕಳ ಶಾಲೆಗಳಾಗಿರಲಿ ಅಥವಾ ಗಂಡುಮಕ್ಕಳ ಶಾಲೆಗಳಾಗಿರಲಿ, ಆಂಗ್ಲೊ-ವರ್ನಾಕ್ಯುಲರ್ ಆಗಿರಲಿ ಅಥವಾ ವರ್ನಾಕ್ಯುಲರ್ ಆಗಿರಲಿ ಅದು ಸಮಾನವಾಗಿ ಅನ್ವಯವಾಗಬೇಕು. ಯಾವ ಪರಿಸ್ಥಿತಿಗಳಲ್ಲಿ ಶಾಲೆಗಳಿಗೆ ನೆರವನ್ನು ನೀಡಲಾಗುತ್ತಿದೆ ಎನ್ನುವುದನ್ನು ಸ್ಪಷ್ಟವಾಗಿ ಮತ್ತು ಸಾರ್ವಜನಿಕವಾಗಿ ಇಂಡಿಯಾದ ದೇಶವಾಸಿಗಳ ಮುಂದೆ ಇರಿಸಬೇಕು. ಈ ಉದ್ದೇಶಕ್ಕಾಗಿ ಸರ್ಕಾರಿ ಅಧಿಸೂಚನೆಗಳನ್ನು ರಚಿಸಬೇಕು ಮತ್ತು ಅದನ್ನು ವಿವಿಧ ದೇಶೀಯ ಭಾಷೆಗಳಲ್ಲಿ ಪ್ರಸಾರಮಾಡಬೇಕು. ಅವುಗಳಲ್ಲಿ ರಿಲಿಜನ್ನಿನ ಪರಿಪೂರ್ಣ ತಾಟಸ್ಥ್ಯದ ನಿಯಮವನ್ನು ಸ್ಪಷ್ಟವಾಗಿ ಘೋಷಿಸುವುದು ಸೂಕ್ತ. ಯಾವುದೇ ಕಾರಣದಿಂದ ನಿರಾಶೆಯುಂಟುಮಾಡುವಂತಹ ಸನ್ನಿವೇಶಗಳ ಕುರಿತು ನಿರೀಕ್ಷೆಗಳನ್ನು ಇಟ್ಟುಕೊಳ್ಳದಂತೆ ಎಚ್ಚರವನ್ನು ವಹಿಸಬೇಕು.

58. ಇಂಡಿಯಾದಲ್ಲಿ ಪ್ರಸ್ತುತ ಇಂಗ್ಲಿಷ್ ಶಿಕ್ಷಣ ಮಾಧ್ಯಮವಾಗಿರುವಂತಹ ಉತ್ತಮಗುಣಮಟ್ಟದ ಪ್ರದೇಶಗಳಲ್ಲಿ ಈ ಅನುದಾನ ಪದ್ಧತಿಯನ್ನು ಜಾರಿಗೆತರುವಲ್ಲಿ ಅಂತಹಕಷ್ಟವೇನೂ ಇರುವುದಿಲ್ಲ.

59. ಅನುದಾನವು ಅಂತಹ ಎಲ್ಲಆಂಗ್ಲೊ-ವರ್ನಾಕ್ಯುಲರ್ ಮತ್ತು ವರ್ನಾಕ್ಯುಲರ್ ಶಾಲೆಗಳಿಗೆ ಒಂದು ಉತ್ತಮವಾದ ಪ್ರಾಥಮಿಕ ಶಿಕ್ಷಣವನ್ನು ನೀಡಲು ಕೂಡಲೇ ನೆರವನ್ನೂ ನೀಡುತ್ತದೆ. ಆದರೆ ನಮಗಿರುವ ಆತಂಕವೇನೆಂದರೆ ಈ ಶ್ರೇಣಿಯ ಶಾಲೆಗಳು ಪ್ರಸ್ತುತ ಗಣನೀಯ ಪ್ರಮಾಣದಲ್ಲಿಲ್ಲ, ಮತ್ತು ಯಾವ ಶಾಲೆಗಳು ಅಸ್ತಿತ್ವದಲ್ಲಿ ಇವೆಯೋ ಅವುಗಳಿಗೆ ಭಾರಿ ಸುಧಾರಣೆಯ ಆವಶ್ಯಕತೆ ಇದೆ.

60. ``ದೇಶಿಯ ಶಾಲೆಗಳ'' ಗುಣಲಕ್ಷಣಗಳನ್ನು ಉನ್ನತೀಕರಿಸಲು ಸಾಮಾನ್ಯ ಅನುದಾನ ಪದ್ಧತಿಯಲ್ಲಿಅನುಸರಿಸುವುದಕ್ಕಿಂತ ಹೆಚ್ಚು ಸೂಕ್ಷ್ಮವಾದ ಮತ್ತು ನಿರಂತರವಾದ ಸ್ಥಳೀಯ ಮೇಲ್ವಿಚಾರಣೆಯು ಆವಶ್ಯಕವಾಗಿದೆ. ಪ್ರಸ್ತುತ ಅವು ಗುಣಮಟ್ಟದಲ್ಲಿ ತೀರ ಅದಕ್ಷವಾಗಿರುವುದಷ್ಟೇ ಅಲ್ಲದೆ ಬಹಳ ಅಸ್ಥಿರವಾದ ಅವಧಿಯಲ್ಲಿವೆ. ಬೆಂಗಾಲ್ ಮತ್ತು ಬಿಹಾರ್‌ಗಳಲ್ಲಿ ಮಿ. ಆಡಮ್ ಸಂಗ್ರಹಿಸಿದ ಅಂಕಿಅಂಶಗಳಿಂದ ಇದು ಸುವ್ಯಕ್ತವಾಗಿದೆ, ಮತ್ತು ಇತ್ತೀಚಿನ ವರ್ಷಗಳಲ್ಲಿ

ವಾಯವ್ಯ ಪ್ರಾಂತ್ಯಗಳಿಂದ ನಾವು ಸ್ವೀಕರಿಸಿದ ಬಹಳ ಮುಖ್ಯವಾದ ಮಾಹಿತಿಯಿಂದ ತಿಳಿದು ಬಂದಿದೆ. ಅಂತಹ ಒಂದು ವ್ಯವಸ್ಥೆಯನ್ನು ಸಂಘಟಿಸುವಾಗ ವಾಯವ್ಯ ಪ್ರಾಂತ್ಯಗಳಲ್ಲಿ ಮಿ. ರೀಡ್ ನಡೆಸಿದ ಕಾರ್ಯಾಚರಣೆಗಳ ರೀತಿಯನ್ನೂ ಅವರ ಮೊದಲನೆಯ ವರದಿಯ ಪರಿಶಿಷ್ಟದಲ್ಲಿ ಸೇರಿಸಲಾಗಿರುವ ಜಿಲ್ಲಾ ಮತ್ತು ಪರಗಣ ಸಂದರ್ಶಕರಿಗೆ ಅವರು ನೀಡಿದ ಸೂಚನೆಗಳನ್ನೂ ನಿಮ್ಮ ಗಮನಕ್ಕೆ ತರುವುದಕ್ಕಿಂತ ಉತ್ತಮವಾದುದನ್ನು ನಾವು ಮಾಡಲಾಗುವುದಿಲ್ಲ.

61. ಸರ್ಕಾರದ ಪರಿಶೀಲನೆಯ ಅಡಿಯಲ್ಲಿ ಸ್ಥಳೀಯ ಆಡಳಿತವು ಕಾರ್ಯನಿರ್ವಹಿಸುವುದನ್ನು ಮತ್ತು ಸಾಧ್ಯವಾದ ಎಡೆಗಳಲ್ಲೆಲ್ಲ ಅನುದಾನದ ಪ್ರಯೋಜನವನ್ನು ಪಡೆದುಕೊಳ್ಳುವುದನ್ನು ನಾವು ನೋಡಲು ಬಯಸುತ್ತೇವೆ. ಶಿಕ್ಷಣವನ್ನು ಕುರಿತ ಸ್ಥಳೀಯ ಬೇಡಿಕೆಯನ್ನು ಪೂರೈಸಲು ಸಮರ್ಥವಾದ ಹಾಗೂ ರಾಜ್ಯಸರ್ಕಾರದ ನೆರವನ್ನು ಪಡೆದುಕೊಂಡಿರುವ ಸಾಕಷ್ಟು ಸಂಖ್ಯೆಯ ವಿದ್ಯಾಸಂಸ್ಥೆಗಳು ಯಾವುದೇ ಜಿಲ್ಲೆಯಲ್ಲಿಇದ್ದರೆ ಅಲ್ಲಿ ಸರ್ಕಾರಿ ಕಾಲೇಜುಗಳು ಅಥವಾ ಶಾಲೆಗಳನ್ನು ಸ್ಥಾಪಿಸಬಾರದು. ಆದರೆದೇಶದಾದ್ಯಂತ ಸಾಕಷ್ಟು ಸಂಖ್ಯೆಯಲ್ಲಿ ಶಾಲೆಗಳನ್ನು ಒದಗಿಸಬೇಕು ಎಂಬ ಅಭಿಪ್ರಾಯವನ್ನು ನಾವು ವ್ಯಕ್ತಪಡಿಸಿದ್ದೇವೆ. ಅದನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲು, ಕೆಲವು ವರ್ಷಗಳ ಕಾಲ, ಇಂಡಿಯಾದ ಕೆಲವು ನಿರ್ದಿಷ್ಟ ಭಾಗಗಳ ಅಗತ್ಯಗಳನ್ನು ಪೂರೈಸಬೇಕಾಗುತ್ತದೆ. ಯಾವ ಜಿಲ್ಲೆಗಳಲ್ಲಿ ಈ ಉದ್ದೇಶಕ್ಕಾಗಿ ಸಾಕಷ್ಟು ಪ್ರಯತ್ನಗಳು ನಡೆದಿಲ್ಲವೊ ಅಥವಾ ಸ್ವಲ್ಪ ಮಟ್ಟಿಗೆ ಪ್ರಯತ್ನ ನಡೆದಿವೆಯೊ ಅಂಥ ಪ್ರದೇಶಗಳಲ್ಲಿ ತುರ್ತು ಅಗತ್ಯವಿದ್ದಲ್ಲಿ ಪ್ರತಿಯೊಂದು ಶ್ರೇಣಿಯ ಶಿಕ್ಷಣದ ಸ್ಥಳಗಳ ಸ್ಥಾಪನೆ, ತಾತ್ಕಾಲಿಕ ಬೆಂಬಲ ಮತ್ತು ನಿರ್ವಹಣೆಗಳಿಗೆ ನೆರವನ್ನುನೀಡಬೇಕಾಗುತ್ತದೆ.

62. ಅನುದಾನದ ವ್ಯವಸ್ಥೆಯು ಕ್ರಮೇಣ ಮುಂದುವರಿದರೆ, ಸರ್ಕಾರವು ಸಂಪೂರ್ಣವಾಗಿ ಒದಗಿಸುತ್ತಿರುವ ಶಿಕ್ಷಣದ ಸಾಮಾನ್ಯ ವ್ಯವಸ್ಥೆಯನ್ನು ಸ್ಥಗಿತಗೊಳಿಸುವಂತಹ ಸಮಯಕ್ಕಾಗಿ ನಾವು ಎದುರು ನೋಡುತ್ತೇವೆ. ವಿಶೇಷವಾಗಿ ಉನ್ನತ ಶ್ರೇಣಿಯ ಸಂಸ್ಥೆಗಳನ್ನು ಸುರಕ್ಷಿತವಾಗಿ ಮುಚ್ಚಬಹುದು ಅಥವಾ ಸ್ಥಳೀಯ ನಿಕಾಯಗಳಿಗೆ ವರ್ಗಾವಣೆ ಮಾಡಬಹುದು. ಅಥವಾಸರ್ಕಾರದ ನಿಯಂತ್ರಣ ಮತ್ತು ಸಹಾಯದ ಅಡಿಯಲ್ಲಿ ಅವು ಮುಂದುವರಿಯಬಹುದು. ಆದರೆ ಒಂದು ಶಾಲೆಯನ್ನು ಕೂಡ ಅವನತಿಗೆ ತಳ್ಳುವ ಸಾಧ್ಯತೆ ಸೃಷ್ಟಿಸಿ ಶಿಕ್ಷಣದ ಪ್ರಸಾರವನ್ನು ಕಿಂಚಿತ್ತಾದರೂ ತಡೆಯಬೇಕೆನ್ನುವುದು ನಮ್ಮಉದ್ದೇಶವಲ್ಲ. ಆದ್ದರಿಂದ ನಾವು ನಿಮ್ಮ ಮತ್ತು ವಿವಿಧ ಪ್ರಾಧಿಕಾರಗಳ ವಿವೇಚನೆಗೆ ಇದನ್ನು ಸಂಪೂರ್ಣವಾಗಿ ಒಪ್ಪಿಸುತ್ತೇವೆ. ಈ ಉದ್ದೇಶವನ್ನು ಸ್ಥಿರವಾಗಿ ನಿಮ್ಮ ದೃಷ್ಟಿಯಲ್ಲಿಟ್ಟುಕೊಂಡು ಎಚ್ಚರಿಕೆಯಿಂದ ಕಾರ್ಯಪ್ರವೃತ್ತರಾಗಬೇಕು. ಇಂಡಿಯಾದ ವಿವಿಧ ಭಾಗಗಳಲ್ಲಿ ಶಿಕ್ಷಣಕ್ಕಿರುವ ಬೇಡಿಕೆಯ ಮೇಲೆ ಪರಿಣಾಮ ಬೀರುವಂತಹ ನಿರ್ದಿಷ್ಟ ಸನ್ನಿವೇಶಗಳ ವಿಶೇಷ ಪರಾಮರ್ಶೆಯಿಂದ ಮುಂದುಡಿಯಿಡಬೇಕು.

63. ಉಚಿತ ಮತ್ತು ಸ್ಟೈಪೆಂಡ್ಯರಿ ವಿದ್ಯಾರ್ಥಿವೇತನಗಳ ವ್ಯವಸ್ಥೆಯನ್ನು ಶಿಕ್ಷಣ ಸಂಸ್ಥೆಗಳ ವಿವಿಧ ಶ್ರೇಣಿಗಳ ನಡುವಿನ ಸಂಪರ್ಕದ ಕೊಂಡಿ ಎಂದು ನಾವು ಈಗಾಗಲೇ ಹಲವು ಬಾರಿ ಉಲ್ಲೇಖಿಸಿದ್ದೇವೆ. ನಮ್ಮ ವಿಸ್ತೃತ ಶೈಕ್ಷಣಿಕ

ಯೋಜನೆಗಳನ್ನು ಅನುಷ್ಠಾನಕ್ಕೆ ತರುವಲ್ಲಿ, ಕೆಲಮಟ್ಟಿಗೆ ಆ ವ್ಯವಸ್ಥೆಯ ಪುನರವಲೋಕನ ಮತ್ತು ವಿಸ್ತರಣೆಯ ಅಗತ್ಯವಿದೆ. 1839ರಲ್ಲಿ ಲಾರ್ಡ್ ಆಕ್ಲೆಂಡ್ ಪ್ರಸ್ತಾವಿಸಿದ ಉದ್ದೇಶವು ಪರಿಪೂರ್ಣವಾ ಗಿಅನುಷ್ಠಾನಗೊಳ್ಳಬೇಕು ಎನ್ನುವುದನ್ನು ನೋಡುವುದು ನಮ್ಮ ಅಪೇಕ್ಷೆ: ಅವನ ಪ್ರಕಾರ ``ಜಿಲ್ಲಾ ಶಾಲೆಗಳನ್ನು ಕೇಂದ್ರಿಯ ಕಾಲೇಜುಗಳಿಗೆ ಜೋಡಿಸುವುದು. ಜಿಲ್ಲಾ ಶಾಲೆಗಳಲ್ಲಿ ಅರ್ಹರಾದ ಉತ್ತಮ ವಿದ್ಯಾರ್ಥಿಗಳನ್ನು ಕೇಂದ್ರೀಯ ಕಾಲೇಜುಗಳ ವಿದ್ಯಾರ್ಥಿ ವೇತನಗಳಿಗೆ ಸಂಲಗ್ನಗೊಳಿಸುವ ಮೂಲಕ ಇದನ್ನು ಸಾಧಿಸಬಹುದು.'' ಅಲ್ಲದೆ ನಾವು ಈಗ ಪ್ರಸ್ತಾವಿಸುವ ಕ್ರಮಗಳು ಒಂದು ವ್ಯವಸ್ಥಿತ ರೂಪದಲ್ಲಿವೆಯಾದ್ದರಿಂದ ಕೆಳಹಂತದ ಶಾಲೆಗಳ ವಿಷಯದಲ್ಲಿ ಇದೇ ವ್ಯವಸ್ಥೆಯನ್ನು ಅಳವಡಿಸಬಹುದು. ಕೆಳಹಂತದ ಶಾಲೆಗಳ ಅತ್ಯುತ್ತಮ ವಿದ್ಯಾರ್ಥಿಗಳಿಗೆ ಉನ್ನತ ಹಂತದ ಶಾಲೆಗಳ ವಿದ್ಯಾರ್ಥಿ ವೇತನಗಳನ್ನು ನೀಡಬೇಕು. ಇದರಿಂದಾಗಿ ಪ್ರತಿಯೊಂದು ತರಗತಿಯಲ್ಲೂ ಇರುವ ಶ್ರೇಷ್ಠ ಪ್ರತಿಭೆಗೆ ಅದಕ್ಕೆ ಅರ್ಹವಾದ ಯಾವ ಪ್ರೋತ್ಸಾಹ ಮತ್ತು ಬೆಳವಣಿಗೆ ಬೇಕೋ ಅದು ದೊರೆಯುತ್ತದೆ. ಇಂತಹ ವಿದ್ಯಾರ್ಥಿಗಳನ್ನು ಯಾವ ಕಾಲೇಜುಗಳು ಅಥವಾ ಶಾಲೆಗಳಿಗೆ ಸಂಲಗ್ನಗೊಳಿಸಲಾಗುತ್ತದೆಯೋ ಅಲ್ಲಿನ ನಿರ್ವಹಣೆಗೆ ಸಾಕಾಗುವಷ್ಟು ಸ್ಟೈಪೆಂಡ್ಯರಿ ವಿದ್ಯಾರ್ಥಿ ವೇತನದ ಮೊತ್ತವನ್ನುಅವರಿಗೆ ನಿಗದಿಗೊಳಿಸಬೇಕು. ಅನೇಕ ಸಂದರ್ಭಗಳಲ್ಲಿ ಈ ಶಾಲಾ ಕಾಲೇಜುಗಳು ವಿದ್ಯಾರ್ಥಿಗಳ ಮನೆಯಿಂದ ಸ್ವಲ್ಪದೂರದಲ್ಲಿಯೇಇರುತ್ತವೆ. ವಿದ್ಯಾರ್ಥಿ ವೇತನವನ್ನು ನೀಡುವ ಈ ಪದ್ಧತಿಯನ್ನು ಸರ್ಕಾರದ ನೇರ ಉಸ್ತುವಾರಿಯಲ್ಲಿರುವ ಶಿಕ್ಷಣ ಸ್ಥಳಗಳಲ್ಲಷ್ಟೇ ಅಲ್ಲದೆ ಈಗ ನಮ್ಮ ಸಾಮಾನ್ಯ ವ್ಯವಸ್ಥೆಯ ಅಡಿಯಲ್ಲಿತರಲಾಗುವಎಲ್ಲ ಶಿಕ್ಷಣ ಸಂಸ್ಥೆಗಳಲ್ಲೂ ಅನುಷ್ಠಾನಕ್ಕೆ ತರಬೇಕು ಎನ್ನುವುದು ಅಪೇಕ್ಷಣೀಯ ಎಂದು ನಾವು ಭಾವಿಸುತ್ತೇವೆ.

64. ಅದೇ ಸಮಯದಲ್ಲಿ, ನಮ್ಮ ಅಭಿಪ್ರಾಯವೇನೆಂದರೆ, ನಾವು ಉಲ್ಲೇಖಿಸಿರುವುದನ್ನು ಬಿಟ್ಟು ಉಳಿದ ಸರ್ಕಾರಿ ವಿದ್ಯಾರ್ಥಿ ವೇತನಗಳಿಗೆ ತಗಲುವ ವೆಚ್ಚವು ಗಣನೀಯ ಪ್ರಮಾಣದ ಮೊತ್ತವಾಗಿರುವುದರಿಂದ ಅದನ್ನು ಕ್ರಮೇಣ ಕಡಮೆ ಮಾಡಬೇಕು. ಆದರೆ ಅವುಗಳನ್ನು ಪ್ರಸ್ತುತ ಪಡೆಯುತ್ತಿರುವವರಿಗೆ ಕೊರತೆ ಮಾಡಬಾರದು. ಸಾಮರ್ಥ್ಯವಿದ್ದೂ ಸಂಪನ್ಮೂಲಗಳ ಕೊರತೆ ಇರುವ ಯುವ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡುವುದು ನಿಸ್ಸಂಶಯವಾಗಿ ಉಪಯುಕ್ತ ಹಾಗೂ ಸಹಾಯಾರ್ಥವಾದದ್ದು. ಅಂತಹ ಪ್ರಶಂಸನೀಯ ಉದ್ದೇಶಕ್ಕೆ ಮೀಸಲಾದ ಖಾಸಗಿ ದತ್ತಿ ನಿಧಿಗಳಿಗೆ ತಲೆಹಾಕಲು ನಾವು ಅಪೇಕ್ಷಿಸುವುದಿಲ್ಲ ಅಥವಾ ಅಂತಹ ಯಾವುದಾದರೂ ದತ್ತಿ ನಿಧಿಗಳಿಗೆ ನಾವು ಮಾಡಿರಬಹುದಾದ ಸೇರ್ಪಡೆಗಳನ್ನು ಹಿಂದಕ್ಕೆ ತೆಗೆದುಕೊಳ್ಳಲೂ ಅಪೇಕ್ಷಿಸುವುದಿಲ್ಲ. ಆದರೆ ಸರ್ಕಾರದ ಅಧೀನದಲ್ಲಿರುವ ನಿಧಿಗಳು ಪರಿಮಿತವಾಗಿವೆ. ಅವನ್ನು ಸ್ಟೈಪೆಂಡ್‌ಗಳ ಮೂಲಕ ಪಡೆಯಬಹುದಾದ ಜ್ಞಾನಸಂಪಾದನೆಯನ್ನು ಪ್ರೋತ್ಸಾಹಿಸುವುದಕ್ಕೆ ಬಳಸುವ ಔಚಿತ್ಯದ ಬಗೆಗೆ ನಮಗೆ ಶಂಕೆಯಿದೆ. ಅದು ವಿದ್ಯಾರ್ಥಿಯನ್ನು ಪೋಷಿಸುವ ವೆಚ್ಚಕ್ಕಿಂತ ತೀರ ಅಧಿಕವಾಗಿದೆ. ಅಲ್ಲದೆಅವರು ಸಾರ್ವಜನಿಕ ಸೇವೆಗೆ ಅಥವಾ ಬೇರೆಯಾವುದಾದರೂ ಕ್ರಿಯಾಶೀಲ ವೃತ್ತಿಜೀವನಕ್ಕೆ ಪ್ರವೇಶಿಸುವ ಮೂಲಕ ಪಡೆಯಬಹುದಾದ ನ್ಯಾಯಯುತಗಳಿಕೆಗಿಂತ ಅನೇಕ ಪ್ರಸಂಗಗಳಲ್ಲಿ ಅದು ಹೆಚ್ಚಾಗಿಯೇ ಇದೆ.

65. ಏನೇ ಆದರೂ, ನಾವು ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡುತ್ತೇವೆ. ಅದು ಆ ವಿದ್ಯಾರ್ಥಿ ವೇತನಗಳಿಗಿಂತ ಹೆಚ್ಚು ಪ್ರಾಯೋಗಿಕವಾದ ಫಲಿತಾಂಶಗಳನ್ನು ನೀಡುವ ಸಾಧ್ಯತೆಯನ್ನು ಹೊಂದಿದೆ. ಕೆಲವು ವ್ಯಕ್ತಿಗಳು ಸ್ವಾಭಾವಿಕವಾದ ಬೋಧನಾ ಕೌಶಲ್ಯವನ್ನು ಹೊಂದಿರುತ್ತಾರೆ ಮತ್ತು ಅಗತ್ಯವಾದ ಪಾಂಡಿತ್ಯವನ್ನು ಹೊಂದಿರುತ್ತಾರೆ. ಅವರು ಶಾಲಾ ಉಪಾಧ್ಯಾಯರ ವೃತ್ತಿಗೆ ತಮ್ಮನ್ನು ಮುಡಿಪಾಗಿಡಲು ಒಪ್ಪಿಗೆ ಇರುವಂತಹವರು. ಆ ಅವಧಿಯಲ್ಲಿ ಸಹಜ ಶಾಲೆಗಳಲ್ಲಿ ಅಥವಾ ತರಗತಿಗಳಲ್ಲಿ ತೇರ್ಗಡೆಯಾಗಲು ಸಹಾಯಾರ್ಥವಾಗಿ ಅವರಿಗೆ ಮಿತವಾದ ಮಾಸಿಕ ಭತ್ಯೆಗಳ ಅಗತ್ಯವಿರಬಹುದು. ನೀಡುವ ಮೂಲಕ ಅವರು ಪಡೆಯಲು ಸಾಧ್ಯವಾಗುತ್ತದೆ. ಪ್ರಾಯೋಗಿಕ ಉಪಯುಕ್ತತೆಯ ಜೀವನಪಥವನ್ನು ರೂಪಿಸಿಕೊಳ್ಳಲು ಅಗತ್ಯ ತರಬೇತಿಯನ್ನು ಪಡೆಯಲು ಅರ್ಹ ವಿದ್ಯಾರ್ಥಿಗಳಿಗೆ ನಾವು ನೆರವನ್ನು ಕೊಡಬೇಕು. ಜೀವನದುದ್ದಕ್ಕೂ ಗೌರವಾನ್ವಿತ ಸಾಮರ್ಥ್ಯವನ್ನು ಅದು ಅವರಿಗೆ ದೊರಕಿಸಿಕೊಡುತ್ತದೆ. ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳಂತಹ ಶಿಕ್ಷಣ ಸ್ಥಳಗಳ ಪ್ರವೇಶಾತಿಯನ್ನು ರಾಜ್ಯ ಸರ್ಕಾರವು ನಿರ್ವಹಿಸುತ್ತಿರುತ್ತದೆ. ಸರ್ಕಾರದ ಆಶ್ರಯದಲ್ಲಿ ವಿಶೇಷ ಉದ್ಯೋಗವನ್ನು ಕೊಡುವ ಉದ್ದೇಶದಿಂದ ವ್ಯಕ್ತಿಗಳಿಗೆ ಇಲ್ಲಿ ಶಿಕ್ಷಣವನ್ನು ಕೊಡಲಾಗುತ್ತದೆ. ಅಂತಹ ಶಿಕ್ಷಣ ಸ್ಥಳಗಳಿಗೆ ಉದ್ಯೋಗಶೀಲತೆ ಮತ್ತು ಸಾಮರ್ಥ್ಯವನ್ನು ಆಧರಿಸಿ ಪ್ರವೇಶಾತಿಯನ್ನು ನೀಡಬಹುದೆನ್ನುವುದು ನಮ್ಮ ಅಭಿಪ್ರಾಯ. ಹೀಗೆ ಸಾಮಾನ್ಯ ಶಿಕ್ಷಣಕ್ಕೆ ಒಂದು ಪ್ರಾಯೋಗಿಕ ಪ್ರೋತ್ಸಾಹವನ್ನು ಒದಗಿಸಿದಂತಾಗುತ್ತದೆ. ಅದು ಶೈಕ್ಷಣಿಕ ಸೇವೆಯ ಕೊಡುಗೆಗೆ ಅನುರೂಪವಾಗಿರುತ್ತದೆ.

66. ವಿಶ್ವವಿದ್ಯಾಲಯಗಳ ಸ್ಥಾಪನೆಯು ಉನ್ನತಮಟ್ಟದ ತಜ್ಞತೆಯನ್ನು ಗಳಿಸಲು ಮತ್ತಷ್ಟು ಗಣನೀಯವಾದ ಪ್ರಚೋದನೆಯನ್ನು ನೀಡುತ್ತದೆ. ಹೀಗೆ ವರಿಷ್ಠ ವಿದ್ಯಾರ್ಥಿ ವೇತನಗಳಿಗೆ ಸ್ಥಳವನ್ನು ಒದಗಿಸುತ್ತವೆ. ಇದೊಂದು ಹೆಚ್ಚುವರಿ ಅನುಕೂಲ. ವಿಶೇಷ ಸ್ಥಾನವನ್ನುಗಳಿಸಬಹುದಾದ ಅಧಿಕ ಸಂಖ್ಯೆಯ ವ್ಯಾಸಂಗ ವಿಷಯವನ್ನು ಅದು ಒದಗಿಸುತ್ತದೆ. ವಿದ್ಯಾರ್ಥಿಗಳ ಆಯ್ಕೆಗೆ ಅವುಗಳನ್ನು ನೀಡಲಾಗುತ್ತದೆ. ವಿದ್ಯಾರ್ಥಿ ವೇತನಕ್ಕೆ ಒಂದು ಏಕರೂಪದ ಪರೀಕ್ಷೆಯಲ್ಲಿ ಅವುಗಳನ್ನು ಒಳಗೊಳ್ಳಬಹುದು. ಹೀಗೆ ಅವರ ಅಧ್ಯಯನಗಳನ್ನು ಪ್ರಾಯೋಗಿಕವಾಗಿ ನಿರ್ದಿಷ್ಟ ಮಾರ್ಗದಲ್ಲಿ ನಿರ್ದೇಶಿಸಲಾಗುತ್ತದೆ. ಅವು ಅವರಿಗೆ ಜೀವನದ ವಿವಿಧ ವೃತ್ತಿಗಳಲ್ಲಿ ತೊಡಗಿಕೊಳ್ಳಲು ನೆರವಾಗುತ್ತವೆ. ಶಿಕ್ಷಣದ ಅನಂತರ ಅವರು ಅವುಗಳನ್ನು ಅಳವಡಿಸಿಕೊಳ್ಳಬಹುದು.

67. ಇಂಗ್ಲೆಂಡಿನಲ್ಲಿ ಶಿಕ್ಷಣವನ್ನು ಸುಧಾರಿಸಲು ವ್ಯವಸ್ಥಿತವಾದ ಪ್ರಯತ್ನಗಳನ್ನು ಪ್ರಾರಂಭಿಸಿದಾಗ, ಅರ್ಹ ಶಾಲಾ ಉಪಾಧ್ಯಾಯರು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಿರುವುದು ಮತ್ತು ಅಪರಿಪೂರ್ಣ ಬೋಧನಾ ವಿಧಾನಗಳು ದೊಡ್ಡ ಕೊರತೆಯಾಗಿದ್ದವು .ಹಾಗಾಗಿ ಉಪಾಧ್ಯಾಯರಿಗೆ ತರಬೇತಿ ನೀಡಲು ಅಧಿಕೃತವಾದ ಮತ್ತು ಮಾದರಿಯ ಶಾಲೆಗಳನ್ನು ಸ್ಥಾಪಿಸಲಾಯಿತು. ಆ ಮೂಲಕ ಪ್ರಾಥಮಿಕ ಶಾಲೆಗಳ ಸಂಘಟನೆ, ಶಿಸ್ತು ಮತ್ತು ಬೋಧನೆಗೆ ಒಂದು ಮಾದರಿಯನ್ನು ಒದಗಿಸಲಾಯಿತು. ಇಂಡಿಯಾದಲ್ಲಿ ಈ ಕೊರತೆಯು ಹೆಚ್ಚು ಸ್ಪಷ್ಟವಾಗಿ ಗಮನಕ್ಕೆ ಬರುತ್ತಿದೆ. ಏಕೆಂದರೆ ಬೋಧನೆಯ ಕೆಲಸಕ್ಕೆ ಸೂಕ್ತವಾದ ಶಿಕ್ಷಣವನ್ನು ಪಡೆದ ಜನರನ್ನು ಹುಡುಕುವಕಷ್ಟು ಬೃಹತ್ತಾಗಿದೆ. ಎಷ್ಟು

ಸಾಧ್ಯವೋ ಅಷ್ಟು ಕಡಿಮೆ ಸಮಯದಲ್ಲಿ ಇಂಡಿಯಾದ ಪ್ರತಿಯೊಂದು ಪ್ರಾಂತ್ಯದಲ್ಲೂ ಉಪಾಧ್ಯಾಯರಿಗೆ ತರಬೇತಿ ಶಾಲೆಗಳು ಮತ್ತು ತರಗತಿಗಳನ್ನು ಸ್ಥಾಪಿಸುವುದನ್ನು ನೋಡಬೇಕೆನ್ನುವುದು ನಮ್ಮ ಅಪೇಕ್ಷೆ. ಸಂಪೂರ್ಣವಾಗಿ ಹೊಸ ಶಾಲೆಗಳನ್ನು ಸ್ಥಾಪಿಸಲು ಪ್ರಯತ್ನಿಸುವುದಕ್ಕಿಂತ ಕೆಲವು ಅಸ್ತಿತ್ವದಲ್ಲಿರುವ ಶಾಲೆಗಳನ್ನು ಈ ಉದ್ದೇಶಕ್ಕಾಗಿ ಸಂಪೂರ್ಣವಾಗಿ ಅಥವಾ ಭಾಗಶಃ ಅವಳಡಿಸಿಕೊಳ್ಳುವುದು ಪ್ರಾಯಃ ಕಡಿಮೆ ಕಷ್ಟದ ಸಂಗತಿಯೆಂದು ತೋರುತ್ತದೆ.

68. ಈ ಉದ್ದೇಶಕ್ಕಾಗಿ ಗ್ರೇಟ್ ಬ್ರಿಟನ್‌ನಲ್ಲಿ ಅಳವಡಿಸಿಕೊಳ್ಳಲಾದ ಯೋಜನೆಯನ್ನು ನಿಮಗೆ ಸೂಚಿಸುವುದಕ್ಕಿಂತ ಉತ್ತಮವಾದ ಕಾರ್ಯವನ್ನು ನಾವು ಮಾಡಲಾರೆವು. ಅದು ಇಂಡಿಯಾದಲ್ಲಿ ಸುಲಭವಾಗಿ ಅಳವಡಿಸಿಕೊಳ್ಳಲು ಸಮರ್ಥವಾಗಿದೆ ಎಂದು ನಮಗೆ ತೋರುತ್ತದೆ. ಪರಿಷತ್ತಿನ ಸಮಿತಿಯ ನಡಾವಳಿಗಳನ್ನು ಪರಾಮರ್ಶಿಸಿದರೆ (ಅದರ ಪ್ರತಿಗಳನ್ನು ನಾವು ಲಗತ್ತಿಸಿದ್ದೇವೆ) ಅದು ಮುಖ್ಯವಾಗಿ ವಿದ್ಯಾರ್ಥಿ-ಉಪಾಧ್ಯಾಯರ ಆಯ್ಕೆ ಮತ್ತು ಸ್ಟೈಪೆಂಡ್ ಕುರಿತು ಹೇಳುತ್ತದೆ ಎನ್ನುವುದನ್ನು ನೀವು ಗಮನಿಸಬೇಕು. (ಅ ಶಾಲೆಗಳ ಉಪಾಧ್ಯಾಯರಿಗೆ ಶಾಲಾ ಅವಧಿಯನ್ನು ಹೊರತುಪಡಿಸಿ ಬೋಧನೆಯನ್ನು ವಹಿಸಿಕೊಟ್ಟಾಗ ಸ್ವಲ್ಪ ಹಣವನ್ನು ನೀಡಬೇಕು.); ಅವರು ಯೋಗ್ಯರೆಂದು ಕಂಡುಬಂದರೆ ಅಂತಿಮವಾಗಿ ಅವರನ್ನು ಅಧಿಕೃತ ಶಾಲೆಗಳಿಗೆ ಕಳುಹಿಸಿಕೊಡುವುದು; ಅಧಿಕೃತ ಶಾಲೆಗಳಲ್ಲಿ ತಮ್ಮ ತರಬೇತಿಯನ್ನು ಪೂರ್ಣಗೊಳಿಸಿದಾಗ ಅವರಿಗೆ ಪ್ರಮಾಣಪತ್ರವನ್ನು ನೀಡುವುದು; ಅನಂತರ ಅವರನ್ನು ಶಾಲಾ ಉಪಾಧ್ಯಾಯರಾಗಿ ನೇಮಕ ಮಾಡಿಕೊಂಡಾಗ ಸಾಕಷ್ಟು ಸಂಬಳವು ದೊರೆಯುವಂತೆ ಖಚಿತಪಡಿಸಿಕೊಳ್ಳುವುದು. ಈ ವ್ಯವಸ್ಥೆಯನ್ನು ಇಂಡಿಯಾದಲ್ಲಿ ಸರ್ಕಾರಿ ಕಾಲೇಜುಗಳು ಮತ್ತು ಶಾಲೆಗಳು ಎರಡರಲ್ಲಿಯೂ ಅನುಷ್ಠಾನಕ್ಕೆ ತರಬೇಕು ಮತ್ತು ಸರ್ಕಾರದ ಪರಿಶೀಲನೆಯ ಅಡಿಯಲ್ಲಿ ತರಲಾಗುವ ಎಲ್ಲ ಸಂಸ್ಥೆಗಳಲ್ಲೂ ಅನುದಾನ ಪದ್ಧತಿಯನ್ನು ಜಾರಿಗೆತರಬೇಕು. ಅಧಿಕೃತ ಶಾಲೆಗಳಲ್ಲಿ ವಿದ್ಯಾರ್ಥಿ-ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳಿಗೆ ಸ್ಟೈಪೆಂಡಿನ ಮೊತ್ತವನ್ನು ನಿಗದಿಪಡಿಸುವಾ ಅತ್ಯಂತ ಎಚ್ಚರವನ್ನು ವಹಿಸಬೇಕು. ವಿದ್ಯಾರ್ಥಿ-ಉಪಾಧ್ಯಾಯರು ಅವರು ಶಾಲೆಯನ್ನು ಬಿಟ್ಟರೆ ಎಷ್ಟು ಮೊತ್ತವನ್ನು ಸಂಪಾದಿಸಬಹುದೋ ಅದಕ್ಕಿಂತ ಸ್ವಲ್ಪ ಹೆಚ್ಚಿನ ಭತ್ಯೆಗಳನ್ನು ಪಡೆಯಬೇಕು, ಮತ್ತು ವಿದ್ಯಾರ್ಥಿಗಳಿಗೆ ನೀಡುವ ಸ್ಟೈಪೆಂಡ್‌ಅನ್ನು ವಿದ್ಯಾರ್ಥಿವೇತನ ನೀಡಲು ನಾವು ನಿಗದಿಪಡಿಸಿದ ಕ್ರಮದಲ್ಲಿಯೇ ನಿಯಂತ್ರಿಸಬೇಕು.

69. ಈ ಕ್ರಮಗಳನ್ನು ಅನುಷ್ಠಾನಕ್ಕೆ ತರುವಾಗ ಇಂಡಿಯಾದ ಅಸಂಖ್ಯಾತ ಶ್ರೇಣಿಗಳ ದೇಶವಾಸಿಗಳ ಸ್ಥಾನಮಾನ ಮತ್ತು ಭವಿಷ್ಯವನ್ನು ನೀವು ಗಮನಕ್ಕೆ ತೆಗೆದುಕೊಳ್ಳಬೇಕೆಂದು ಕೋರಲಾಗಿದೆ. ಅವರು ತಮ್ಮ ಸಹ ದೇಶವಾಸಿಗಳಿಗೆ ಶಿಕ್ಷಣವನ್ನು ನೀಡುವ ಕರ್ತವ್ಯವನ್ನು ಕೈಗೆತ್ತಿಕೊಳ್ಳಲು ಸಿದ್ಧರಾಗಿದ್ದಾರೆ. 1831ರ ನಿವೃತ್ತಿವೇತನದ ನಿಯಮಾವಳಿಯನ್ನು ಶೈಕ್ಷಣಿಕ ಸೇವೆಗೆ ತಡವಾಗಿ ವಿಸ್ತರಿಸಲಾಗಿದೆ. ಈ ನಿಯಮಾವಳಿಗಳನ್ನು ಪ್ರಸ್ತುತ ಪರಿಷ್ಕೃತ ನಿಯಮಾವಳಿಗಳಿಗೆ ಅಳವಡಿಸಿಕೊಳ್ಳುವುದು ಅಗತ್ಯವಾಗಬಹುದು. ನಮ್ಮ ಆಶಯವೇನೆಂದರೆ ಭವಿಷ್ಯದಲ್ಲಿ ಶಾಲಾ ಉಪಾಧ್ಯಾಯರ ವೃತ್ತಿಯು, ಸಾರ್ವಜನಿಕ ಸೇವೆಯ ಇತರ ಶಾಖೆಗಳಲ್ಲಿ ಇರುವ ಹಾಗೆ ಇಂಡಿಯಾದ

ದೇಶವಾಸಿಗಳಿಗೆ ಪ್ರೇರಣೆಯನ್ನು ನೀಡುವಂತಾಗಬೇಕು. ನಾವು ನೋಡಲು ಬಯಸುವ ಅಂತಹ ವರ್ಗದ ಶಾಲಾ ಉಪಾಧ್ಯಾಯರನ್ನು ಒದಗಿಸುವುದು ಕಾಲಕ್ಕೆ ಬಿಟ್ಟ ಕೆಲಸವಾಗಿದೆ, ಮತ್ತು `ದೇಶೀಯ ಶಾಲೆಗಳನ್ನು' ಪ್ರೋತ್ಸಾಹಿಸುವಲ್ಲಿ ನಮ್ಮ ಪ್ರಸ್ತುತ ಗುರಿಯುಏನೆಂದರೆ ನಮ್ಮ ಸುಪರ್ದಿನಲ್ಲಿರುವ ಶಿಕ್ಷಕರನ್ನು ಸುಧಾರಿಸುವುದು ಮತ್ತು ಅವರ ದ್ವೇಷವನ್ನು ಕಟ್ಟಿಕೊಳ್ಳದಂತೆ ಎಚ್ಚರಿಕೆಯನ್ನು ವಹಿಸುವುದು. ಅವರ ಪ್ರಭಾವವು ಕೆಳ ವರ್ಗದಜನರ ಮೇಲೆ ಎಷ್ಟು ಪ್ರಬಲವಾಗಿದೆಯೆಂದರೆ ಅಂಥ ಸಂದರ್ಭಗಳು ಎದುರಾದಾಗ ಅಂಥ ಸನ್ನಿವೇಶದಿಂದ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಿರುವಲ್ಲೆಲ್ಲ ಅವರನ್ನು ಮೀರಿ ಹೋಗಬಾರದು. ಮಿಗಿಲಾಗಿ ಈ ದರ್ಜೆಯ ಉಪಾಧ್ಯಾಯರಿಗಾಗಿ ಇನ್ನು ಮುಂದೆ ಸ್ಥಾಪಿಸಲಾಗುವ ಅಧಿಕೃತ ಶಾಲೆಗಳು ಮತ್ತು ತರಗತಿಗಳಿಗೆ ಹಾಜರಾಗುವಂತೆ ಅವರನ್ನು ಪ್ರೋತ್ಸಾಹಿಸಬೇಕು.

70. ಶಾಲಾ ಉಪಾಧ್ಯಾಯರಿಗೆ ತರಬೇತಿ ಕೊಡುವಷ್ಟೇ ಮುಖ್ಯವಾದದ್ದು ದೇಶೀಯ ಭಾಷೆಯಲ್ಲಿ ಶಾಲಾ ಪಠ್ಯಪುಸ್ತಕಗಳನ್ನು ಒದಗಿಸುವುದು. ಶಾಲೆಗಳ ಕೆಳಹಂತದ ತರಗತಿಗಳಲ್ಲಿ ಐರೋಪ್ಯ ಮಾಹಿತಿಯನ್ನು ಅವು ಒದಗಿಸಬೇಕು. ಅದೇ ಅಧ್ಯಯನದ ಉದ್ದೇಶವಾಗಿರಬೇಕು. ಈ ನಿಟ್ಟಿನಲ್ಲಿ ಇತ್ತೀಚಿನ ವರ್ಷಗಳಲ್ಲಿ ಒಂದಿಷ್ಟು ಕಾರ್ಯವನ್ನು ಮಾಡಲಾಗಿದೆ, ಆದರೆ ಮಾಡಬೇಕಾದದ್ದು ಇನ್ನೂ ಬಹಳಷ್ಟಿದೆ. ಕೊರತೆಗಳನ್ನು ತತ್‌ಕ್ಷಣ ಮತ್ತು ಕ್ಷಿಪ್ರವಾಗಿ, ಮಿ. ಎಮ್. ಎಲ್ಫಿನ್‌ಸ್ಟೋನ್ ಅವರು 1825ರಲ್ಲಿ ಶಿಫಾರಸು ಮಾಡಿದ ಕ್ರಮವನ್ನು ಅಳವಡಿಸಿಕೊಳ್ಳುವ ಮೂಲಕ ಪೂರೈಸಬಹುದು ಎಂದು ನಾವು ನಂಬುತ್ತೇವೆ: ``ಕೆಲವು ನಿರ್ದಿಷ್ಟ ಪುಸ್ತಕಗಳ ಅತ್ಯುತ್ತಮ ಅನುವಾದಗಳಿಗೆ ಅಥವಾ ನಿರ್ದಿಷ್ಟ ಭಾಷೆಗಳಲ್ಲಿ ಅತ್ಯುತ್ತಮ ಪ್ರಕರಣ ಗ್ರಂಥಗಳಿಗೆ ಜಾಹೀರಾತು ಕೊಡಬೇಕು ಮತ್ತು ಉದಾರವಾಗಿ ಪುರಸ್ಕಾರಗಳನ್ನು ಕೊಡಬೇಕು.''

71. ಸಂಕಲನಗಳು ಮತ್ತು ಮೂಲ ರಚನೆಗಳನ್ನು ಮಾಡುವಾಗ ಗುರಿಯು ಏನಾಗಿರಬೇಕೆಂದರೆ (ಬೆಂಗಾಲ್‌ನಲ್ಲಿ ಶಿಕ್ಷಣದ ಪರಿಸ್ಥಿತಿಯನ್ನು ಕುರಿತು ಮಿ. ಆಡಮ್ಸ್ ಅವರ ಮೌಲಿಕ ವರದಿಗಳಿಂದ ಉದ್ಧರಿಸುವುದಾದರೆ), ``ಐರೋಪ್ಯ ಕೃತಿಗಳನ್ನು ದೇಶೀಯ ಭಾಷೆಗಳ ಶಬ್ದಗಳು ಮತ್ತು ನುಡಿಗಟ್ಟುಗಳಿಗೆ ಅನುವಾದ ಮಾಡದಿರುವುದು, ಬದಲಿಗೆ ಐರೋಪ್ಯಜ್ಞಾನದ ಸಾರವನ್ನು ದೇಶೀಯ ಚಿಂತನೆ ಮತ್ತು ಭಾವುಕತೆಯ ರೂಪಗಳಿಗೆ ಸಂಯೋಜಿಸುವ ಮೂಲಕ ಉಪಯುಕ್ತವಾದ ಮತ್ತು ಆಕರ್ಷಕವಾದ ಶಾಲಾ ಪುಸ್ತಕಗಳನ್ನು ನಿರೂಪಿಸುವುದು.'' ಈ ವಿಷಯವನ್ನು ಕುರಿತು ಮಿ. ರೀಡ್ ಅವರು ತಮ್ಮ ವರದಿಯಲ್ಲಿ ಹೇಳಿದ ಕೆಲವು ಮೌಲಿಕವಾದ ಅಭಿಪ್ರಾಯಗಳನ್ನು ಉಲ್ಲೇಖಿಸಲು ನಮಗೆ ಸಂತಸವಾಗುತ್ತದೆ. ಈ ವರದಿಯನ್ನು ಈಗಾಗಲೇ ನಾವು ಉದ್ಧರಿಸಿದ್ದೇವೆ. ಭೂಗೋಳವನ್ನು ಕುರಿತ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಹೆಚ್ಚು ವಿಶೇಷವಾಗಿ ಇದನ್ನು ಹೇಳಲಾಗಿದೆ. ಇಂಡಿಯಾದ ವಿವಿಧ ಭಾಗಗಳ ಸ್ಥಳೀಯ ವೈಶಿಷ್ಟ್ಯಗಳು ತಿಳಿಸುವ ಸಂಗತಿಯೆAದರೆ ಪ್ರತಿ ತರಗತಿಯ ಪುಸ್ತಕಗಳೂ ಈ ಜನರ ಭಾವನೆಗಳು, ಅನುಕಂಪಗಳು ಮತ್ತು ಇತಿಹಾಸವನ್ನು ವಿಶೇಷವಾಗಿ ಅಳವಡಿಸಿಕೊಳ್ಳಬೇಕೆನ್ನುವುದು ಸುಸ್ಪಷ್ಟ. ಮತ್ತಷ್ಟು ಮುಂದುವರಿದು ಈ ವಿಚಾರವಾಗಿ ನಾವು ಹೇಳುವುದೆಂದರೆ ಈ ಹಿಂದೆ ಆಗಲೇ ನಾವು ಗಮನಿಸಿದಂತೆ, ದೇಶೀಯ ಭಾಷೆಗಳನ್ನು ಶ್ರೀಮಂತಗೊಳಿಸಲು ಓರಿಯೆಂಟಲ್ ಕಾಲೇಜುಗಳನ್ನು,

ಸಾಮಾನ್ಯವಾಗಿ ಪೋಷಿಸುವುದರ ಜೊತೆಗೆ, ಆ ಭಾಷೆಗಳಲ್ಲಿ ವೈಜ್ಞಾನಿಕ ಪುಸ್ತಕಗಳನ್ನು ಅನುವಾದಿಸುವಲ್ಲಿ ಅದ್ಭುತವಾಗಿ ಉಪಯೋಗಿಸಿಕೊಳ್ಳಬಹುದು. ದೆಹಲಿ, ಬೆನಾರಸ್ ಮತ್ತು ಪೂನಾ ಕಾಲೇಜುಗಳಲ್ಲಿ ಈಗಾಗಲೇ ಇದನ್ನು ಮಾಡಲಾಗಿದೆ.

72. ಸದಾ ನಮ್ಮಅಭಿಪ್ರಾಯವು ಏನಾಗಿದೆಯೆಂದರೆ, ಇಂಡಿಯಾದಲ್ಲಿ ಶಿಕ್ಷಣದ ಪ್ರಸರಣವು, ಸರ್ಕಾರದ ಪ್ರತಿಯೊಂದು ಇಲಾಖೆಯಲ್ಲೂ ಬುದ್ಧಿವಂತರಾದ ಮತ್ತು ವಿಶ್ವಾಸಾರ್ಹರಾದ ಜನರ ಸೇವೆಯನ್ನು ನಿಮಗೆ ದೊರಕಿಸಿಕೊಡುತ್ತದೆ. ಆ ಮೂಲಕ, ಆಡಳಿತದ ಎಲ್ಲ ಶಾಖೆಗಳಲ್ಲಿ ಉನ್ನತವಾದ ದಕ್ಷತೆಯನ್ನು ತರುತ್ತದೆ. ಇನ್ನೊಂದು ಕಡೆ, ವಿವಿಧ ಬಗೆಯ ಅಸಂಖ್ಯಾತ ಖಾಲಿ ಹುದ್ದೆಗಳನ್ನು ನಿರಂತರವಾಗಿ ತುಂಬುತ್ತಲೇ ಇರುವಾಗ, ಶಿಕ್ಷಣಕ್ಕೆ ಇನ್ನೂ ಹೆಚ್ಚಿನ ಪ್ರೇರಣೆಯನ್ನು ನೀಡುತ್ತದೆ ಎಂದು ನಾವು ನಂಬುತ್ತೇವೆ. ಮೊದಲನೆಯ ಉದ್ದೇಶವು ಈ ಖಾಲಿ ಸ್ಥಾನಗಳನ್ನು ತುಂಬಲು ಸೂಕ್ತ ಅರ್ಹತೆಯಿರುವ ವ್ಯಕ್ತಿಗಳನ್ನು ಆಯ್ಕೆ ಮಾಡುವುದು. ಇದಕ್ಕೆ ಆನುಷಂಗಿಕವಾದುದೆಂದರೆ ಜನಪ್ರಿಯ ಶಿಕ್ಷಣವನ್ನು ಪ್ರೋತ್ಸಾಹಿಸಲು ಎಷ್ಟರಮಟ್ಟಿಗೆ ಅವರನ್ನು ವಿತರಣೆ ಮಾಡಬಹುದು ಎನ್ನುವುದು.

73. 1844ರ ಅಕ್ಟೋಬರ್ 10ನೇ ದಿನಾಂಕದ ಪರಿಷತ್ತಿನ ಗವರ್ನರ್ ಜನರಲ್‌ಅವರ ನಿರ್ಣಯಗಳ ಪ್ರಕಾರ ಸಾರ್ವಜನಿಕ ಸೇವೆಗೆ ಅವಿದ್ಯಾವಂತರಿಗಿಂತ ಚೆನ್ನಾಗಿ ವಿದ್ಯೆಯನ್ನು ಕಲಿತವರಿಗೆ ಸಾಮಾನ್ಯ ಆದ್ಯತೆಯನ್ನು ಕೊಡಬೇಕು. ಆ ವರ್ಷದ ಅನಂತರ ಬೆಂಗಾಲ್‌ನ ಕಂದಾಯ ಇಲಾಖೆಯಲ್ಲಿ ನೇಮಕ ಮಾಡಿಕೊಂಡ ಜನರನ್ನು ಕುರಿತ ವಾರ್ಷಿಕ ವರದಿಗಳನ್ನು ಮತ್ತು ಇಂಡಿಯಾದ ವಿವಿಧ ಭಾಗಗಳಿಂದ ಶೈಕ್ಷಣಿಕ ವರದಿಗಳನ್ನು ಇತ್ತೀಚೆಗೆ ಸ್ವೀಕರಿಸಿದ್ದೇವೆ. ಈಚಿನ ವರ್ಷಗಳಲ್ಲಿ ಗಣನೀಯ ಸಂಖ್ಯೆಯ ಸುಶಿಕ್ಷಿತ ಜನರನ್ನು ಸರ್ಕಾರದ ಅಡಿಯಲ್ಲಿ ನೇಮಕ ಮಾಡಿಕೊಳ್ಳಲಾಗಿದೆ ಎಂದು ಸಾಕಷ್ಟು ತೃಪ್ತಿಯಿಂದ ಗಮನಿಸಿದ್ದೇವೆ. ನಾವು ತಿಳಿದಂತೆ ಇಂಡಿಯಾದ ಅನೇಕ ಭಾಗಗಳಲ್ಲಿ ಸರ್ಕಾರಕ್ಕೆ ನೇಮಕಾತಿಯನ್ನು ಮಾಡಿಕೊಳ್ಳುವ ಅಗತ್ಯಕ್ಕಿಂತ ಸೂಕ್ತವಾದ ಅರ್ಹತೆಯುಳ್ಳ ವ್ಯಕ್ತಿಗಳನ್ನು ನೇಮಕಾತಿ ಮಾಡಿಕೊಳ್ಳುವ ಅಗತ್ಯವೇ ಎದ್ದು ಕಾಣಿಸುತ್ತಿದೆ.

74. ಪ್ರಶಂಸನೀಯ ವಿದ್ಯಾರ್ಥಿಗಳ ಪಟ್ಟಿಯನ್ನು ವಾರ್ಷಿಕವಾಗಿ ಸರ್ಕಾರಕ್ಕೆ ಸಲ್ಲಿಸಬೇಕೆಂಬ ನಿರ್ಣಯಗಳ ಭಾಗವು ವಿಫಲವಾಗಿದೆ. ಅದಕ್ಕೆ ಕಾರಣಗಳನ್ನು ನಾವು ಮುಂದಾಲೋಚಿಸಿದ್ದರಿಂದ ಈಗ ಅದನ್ನು ಚರ್ಚಿಸಲು ನಾವು ಪ್ರಯತ್ನಿಸುವುದಿಲ್ಲ. ನಮ್ಮ ಪ್ರಸ್ತುತ ಉದ್ದೇಶಕ್ಕೆ ಸಾಕಾಗುವಷ್ಟು ಸಂಗತಿಯೇನೆಂದರೆ, ಇಲ್ಲಿಯವರೆಗೆ 46 ಜನರಿಗಿಂತ ಹೆಚ್ಚಿಲ್ಲದಷ್ಟು ವ್ಯಕ್ತಿಗಳನ್ನು ಬೆಂಗಾಲ್ ಗೆಜೆಟ್‌ನಲ್ಲಿ ಪ್ರಕಟಿಸಲಾಗಿದೆ. ಅವರು ಎಲ್ಲರೂ ಸರ್ಕಾರಿ ಕಾಲೇಜುಗಳ ವಿದ್ಯಾರ್ಥಿಗಳು. ನಾವು ವಾರ್ಷಿಕ ವರದಿಗಳನ್ನು ಪಡೆದ ಕಳೆದ ವರ್ಷದಲ್ಲಿ (1852) ಕೇವಲ ಇಬ್ಬರು ವ್ಯಕ್ತಿಗಳನ್ನು ಮಾತ್ರ ಹಾಗೆ ಗುರುತಿಸಲಾಗಿದೆ. ಬೆಂಗಾಲ್‌ನ ಕಂದಾಯ ಮಂಡಲಿಯ ಕಾರ್ಯದರ್ಶಿಯ ವರದಿಯನ್ನು ಥಟ್ಟನೆ ನಂಬುವುದಾದರೆ, ತತ್ತ್ವಜ್ಞಾನ ಮತ್ತು ಗಣಿತದಂತಹ ಅತ್ಯುಚ್ಚ ಶಾಖೆಗಳ ಕಠಿಣವಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ತರುಣರು ಸಾರ್ವಜನಿಕ ಸೇವೆಯನ್ನು ತಮ್ಮ ವೃತ್ತಿಯಾಗಿ ಮಾಡಿಕೊಳ್ಳುವ ಇಚ್ಛೆಯುಳ್ಳವರು ಆಯ್ಕೆ ಮಾಡಿಕೊಳ್ಳುವ ಕೆಲಸಗಳ ಕುರಿತು ಸಹಜವಾಗಿಯೇ ಅನಾಸಕ್ತರಾಗಿದ್ದಾರೆ.

75. ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿದರೆ ಅಂತಹ ಪಟ್ಟಿಗಳು ಅಗತ್ಯವಿರುವುದಿಲ್ಲ. ಪದವಿಯನ್ನು ಪಡೆಯುವುದರಿಂದ, ಅದಕ್ಕೂ ಹೆಚ್ಚಾಗಿ ವಿಶ್ವವಿದ್ಯಾಲಯದ ಮನ್ನಣೆಯನ್ನು ಪಡೆಯುವುದರಿಂದ ಅತ್ಯುನ್ನತ ಶಿಕ್ಷಣವನ್ನು ಪಡೆದ ತರುಣರು ಸರ್ಕಾರದ ಗಮನಕ್ಕೆ ಬರುತ್ತಾರೆ. ಆದ್ದರಿಂದ ಪ್ರಸ್ತುತ ನಿರ್ಣಯಗಳನ್ನು ಮರುಪರಿಶೀಲನೆ ಮಾಡಬೇಕಾಗುತ್ತದೆ. ಇದರಿಂದ ಈ ವಿಚಾರವಾಗಿ ಇರುವ ನಮ್ಮ ಅಭಿಪ್ರಾಯಗಳನ್ನು ಪ್ರಾಯೋಗಿಕವಾಗಿ ಅಳವಡಿಸಿಕೊಳ್ಳಲು ಸಾಧ್ಯವಾಗುತ್ತದೆ. ನಾವು ಅಪೇಕ್ಷಿಸುವುದೇನೆಂದರೆ, ಸರ್ಕಾರದ ಅಡಿಯಲ್ಲಿ ನೇಮಕಗೊಳ್ಳಲು ಅಭ್ಯರ್ಥಿಗಳ ಅರ್ಹತೆಗಳು ಸಮಾನವಾಗಿದ್ದರೆ, ಒಬ್ಬ ವ್ಯಕ್ತಿಯುಎಲ್ಲಿ ಹೇಗಾದರೂ ಗಳಿಸಿರಲಿ, ಉತ್ತಮ ಶಿಕ್ಷಣವನ್ನು ಪಡೆದಿದ್ದರೆ, ಹಾಗೆ ಪಡೆದಿಲ್ಲದವನ ಬದಲುಅವನನ್ನೇ ಆಯ್ಕೆ ಮಾಡಬೇಕು. ಕೆಳ ಹಂತದಲ್ಲಿಯೂ ಕೂಡ ಓದಲು ಬರೆಯಲು ಬರುವವನನ್ನು ಆಯ್ಕೆ ಮಾಡಬೇಕೇ ವಿನಾ ಬೇರೆ ರೀತಿಯಲ್ಲಿ ಸಮಾನವಾಗಿ ಅರ್ಹನಾಗಿದ್ದರೂ ನಿರಕ್ಷರಸ್ಥನನ್ನಲ್ಲ.

76. ಪ್ರಾಯೋಗಿಕವಾಗಿ ಸಾಧ್ಯವಿರುವಕಡೆ ಪರೀಕ್ಷೆಗಳನ್ನು ನಡೆಸುವುದನ್ನು ಕೂಡ ನಾವು ಅನುಮೋದಿಸುತ್ತೇವೆ. ಅಭ್ಯರ್ಥಿಗಳು ಉದ್ಯೋಗವನ್ನು ಅಪೇಕ್ಷಿಸುವ ವಿವಿಧ ಇಲಾಖೆಗಳ ವಿಶೇಷ ಕರ್ತವ್ಯಗಳನ್ನು ನಿರ್ವಹಿಸಲು ತಕ್ಕವರೇ ಎಂದು ನಿರ್ಧರಿಸಲು, ಬಾಂಬೆ ಪ್ರಾಂತ್ಯದಲ್ಲಿ ವಾಡಿಕೆಯಲ್ಲಿರುವಂತೆ, ಸರಳವಾದ ಮತ್ತು ಸಮಗ್ರವಾದ ಸಾಮರ್ಥ್ಯ ಪರೀಕ್ಷೆಗಳನ್ನು ನಡೆಸಬೇಕು. ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಜವಾಬ್ದಾರಿಯನ್ನು ವಹಿಸಿಕೊಂಡಿರುವ ಅಧಿಕಾರಿಗಳು ಅವಿದ್ಯಾವಂತರ ಬದಲು ವಿದ್ಯಾವಂತರನ್ನೇ ಖಾಯಿಷ್ ಮಾಡಬೇಕೆಂದು ನಾವು ವಿಶ್ವಾಸದಿಂದ ಆಗ್ರಹಿಸುತ್ತಿದ್ದೇವೆ. ಮುಕ್ತ ಆಯ್ಕೆಯ ಏಕಮೇವ ಹೊಣೆಗಾರರಾದ ಅವರ ಕಾರ್ಯದಲ್ಲಿ ನಾವು ಅಕ್ಷರಶಃ ಮತ್ತ್ಯಾವುದೇ ನಿಯಮಗಳ ರೂಪದಲ್ಲಿ ಹಸ್ತಕ್ಷೇಪ ಮಾಡಲಾರೆವು.

77. ಇಂಡಿಯಾದಲ್ಲಿ ಸಾರ್ವಜನಿಕ ಸೇವೆಯ ಕುರಿತ ಸುಧಾರಿತ ಶಿಕ್ಷಣದಿಂದ ಈಗಾಗಲೇ ಒಂದಷ್ಟು ಪರಿಣಾಮವುಂಟಾಗಿದೆ ಎಂದು ನಂಬುವಷ್ಟು ನಾವು ಆಶಾವಾದಿಗಳಾಗಿದ್ದೇವೆ. ಇಂಡಿಯಾದ ನಾಗರಿಕ ಅಧಿಕಾರ ವ್ಯಾಪ್ತಿಯ ಬಹುಪಾಲನ್ನು ಈಗ ಬಹುಸಂಖ್ಯೆಯಲ್ಲಿ ಇರುವ ಹಾಗೂ ಅಧಿಕವಾಗುತ್ತಿರುವ ಸ್ಥಳೀಯ ನ್ಯಾಯಾಧೀಶರಿಗೆ ಇಂಡಿಯಾದ ನಾಗರಿಕ ನ್ಯಾಯಾಧಿಕರಣದ ಬಹುಭಾಗವನ್ನು ವಹಿಸಿಕೊಡಲಾಗಿದೆ. ನಮ್ಮ ಅಭಿಪ್ರಾಯದಲ್ಲಿ, ಅವರ ಸಾಮರ್ಥ್ಯ ಮತ್ತು ಪ್ರಾಮಾಣಿಕತೆ ಮತ್ತು ಅವರ ಸಹ ದೇಶವಾಸಿಗಳು ಅವರ ಬಗೆಗೆ ಇರಿಸಿರುವ ಅತ್ಯುನ್ನತವಾದ ಗೌರವಗಳಲ್ಲಿ ಬಹುಪಾಲನ್ನು ಈ ಅಧಿಕಾರಿಗಳು ಶಿಕ್ಷಣದಲ್ಲಿ ಸಾಧಿಸಲಾಗಿರುವ ಪ್ರಗತಿಯ ಪರಿಣಾಮವೆನ್ನಬಹುದಾಗಿದೆ. ಆ ಶಿಕ್ಷಣದೊಡನೆ ಅವರು ಯೂರೋಪಿನ ಸಾಮಾನ್ಯ ಸಾಹಿತ್ಯದಲ್ಲಿ ವ್ಯಾಪಿಸಿರುವ ಅತ್ಯುನ್ನತ ನೈತಿಕ ದೃಷ್ಟಿಕೋನವನ್ನು ಅಳವಡಿಸಿಕೊಂಡಿದ್ದಾರೆ. ಸುಶಿಕ್ಷಿತ ಜನರನ್ನು ನೇಮಿಸಿಕೊಳ್ಳುವುದರಿಂದ ಸಾರ್ವಜನಿಕರು ಪಡೆಯುವ ಅನುಕೂಲತೆಗಳ ನೇರ ಸಾಕ್ಷ್ಯವು ಈ ಉನ್ನತ ಅಧಿಕಾರಿಗಳಿಂದಷ್ಟೇ ಸ್ಪಷ್ಟವಾಗುವುದಿಲ್ಲ. ಸಾರ್ವಜನಿಕ ಶಿಕ್ಷಣವನ್ನು ಕುರಿತ ಡಾಕಾ ಕಾಲೇಜು ವರದಿಯ ಕೊನೆಯ ಕಂತಿನಿಂದ ನಾವು ಉದ್ಧರಿಸುತ್ತಿದ್ದೇವೆ. ಇಂಡಿಯಾದ ಜನರ ಸಂತೋಷದ ಬಹುಪಾಲು ಪೊಲೀಸ್ ಅಧಿಕಾರಿಗಳ ಪ್ರಾಮಾಣಿಕತೆಯನ್ನು ಅವಲಂಬಿಸಿದೆ ಎಂದು ವಿಶಿಷ್ಟ ತೃಪ್ತಿಯಿಂದ ನಾವು

ಹೇಳುತ್ತೇವೆ: ``ಸ್ಥಳೀಯ ಸಮಿತಿಯ ಹೀಗೆ ಹೇಳುತ್ತದೆ: ಡಾಕಾ ಕಾಲೇಜಿನ ಕೆಲವು ಹಳೆಯ ವಿದ್ಯಾರ್ಥಿಗಳು ದರೋಗಕ ಚೇರಿಯ ಶ್ರಮದಾಯಕವಾದ ಕೆಲಸಗಳನ್ನು ಯಶಸ್ವಿಯಾಗಿ ಮುಗಿಸಿದ್ದಾರೆ ಎನ್ನುವುದಕ್ಕೆ ಸಾಧ್ಯವಾದಷ್ಟೂ ಅತ್ಯುತ್ತಮ ಸಾಕ್ಷ್ಯವನ್ನು ಒದಗಿಸಲಾಗಿದೆ.'' ವಿಶೇಷವಾಗಿ ಹೌರಾದ ಮ್ಯಾಜಿಸ್ಟ್ರೇಟರ ಅಡಿಯಲ್ಲಿ ದರೋಗ ಆಗಿ ನೇಮಿಸಲಾಗಿರುವ ಕೃಷ್ಣ ಚಂದರ್‌ದತ್, ಎಲ್ಲ ವರ್ಗದ ಜನರ ಗೌರವ ಮತ್ತು ಮೆಚ್ಚಿಕೆಯನ್ನು ಸಂಪಾದಿಸಿರುವುದರಿಂದ, ಅವರನ್ನು ಪದೋನ್ನತಿಗಾಗಿ ಶಿಫಾರಸ್ ಮಾಡಲಾಗಿದೆ. ಇಂಥ ಜನರು ಸ್ವತಃ ಪ್ರಾಮಾಣಿಕತೆ ಮತ್ತು ನಿಯತ್ತನ್ನು ಆಚರಣೆಯಲ್ಲಿ ಇಟ್ಟುಕೊಂಡಿರುವ ಸಾಧ್ಯತೆ ಇಲ್ಲದಿದ್ದರೂ, ಅದರ ಉದ್ದೇಶವನ್ನು ಹೇಗೆ ಮೆಚ್ಚಬೇಕು ಎಂದು ತಿಳಿದಿದ್ದಾರೆ.

78. ಆದರೆ ಸರ್ಕಾರದ ಆಶ್ರಯದಲ್ಲಿ ದೊರಕುವ ಉದ್ಯೋಗಳ ಸಂಖ್ಯೆಯು ಎಷ್ಟೇ ದೊಡ್ಡದಾಗಿರಲಿ, ಇಂಡಿಯಾದ ದೇಶವಾಸಿಗಳ ಗಮನವನ್ನು ಮುಕ್ತ ಶಿಕ್ಷಣವು ಅವರಿಗೆ ತೆರೆದಿಡುವ ವ್ಯಾಪಕವಾದ ಮತ್ತು ಬಹಳ ಮುಖ್ಯವಾದ ಉಪಯುಕ್ತತೆ ಮತ್ತು ಅನುಕೂಲಗಳ ವಲಯದತ್ತ ನಿರ್ದೇಶಿಸಬೇಕು; ಮತ್ತುಅವರ ಭಾವನೆಗಳನ್ನು ಅರಿತವರು, ಅವರ ಪ್ರಯತ್ನಗಳನ್ನು ಕುರಿತು ಉಪದೇಶಿಸುವ ಅಥವಾ ನಿರ್ದೇಶಿಸುವ ಪ್ರಭಾವ ಅಥವಾ ಅಧಿಕಾರವನ್ನು ಉಳ್ಳವರು ಸುಧಾರಿತ ಜ್ಞಾನದಿಂದ ದೊರಕುವ ಪ್ರಾಯೋಗಿಕ ಪ್ರಯೋಜನಗಳನ್ನು ಕುರಿತು, ನಿರಂತರವಾಗಿ ಅವರ ಮೇಲೆ ಪ್ರಭಾವ ಬೀರಬೇಕು. ಈ ವಿಚಾರದಲ್ಲಿ ಒಂದು ದೃಷ್ಟಾಂತವಾಗಿ, ಪರಿಷತ್ತಿನ ಅಧ್ಯಕ್ಷರಾದ ದಿವಂಗತ ಮಿ. ಬೆಥ್ಯೂನ್ ಅವರು ಡಾಕಾ ಮತ್ತು ಕಿಶನ್‌ಘರ್ ಕಾಲೇಜುಗಳ ವಿದ್ಯಾರ್ಥಿಗಳಿಗೆ ನೀಡಿದ ನಿರರ್ಗಳ ಉಪನ್ಯಾಸವನ್ನು ನಾವು ಸಂತೋಷ ಮತ್ತು ಪಶ್ಚಾತ್ತಾಪದ ಮಿಶ್ರ ಭಾವನೆಗಳೊಡನೆ ಉಲ್ಲೇಖಿಸುತ್ತೇವೆ.

79. ಇಂಡಿಯಾದಲ್ಲಿನ ಶಿಕ್ಷಣವನ್ನು ಕುರಿತ ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದ ಇತರ ಕೆಲವು ಅಂಶಗಳನ್ನು ನಾವು ಈಗ ಸಂಕ್ಷಿಪ್ತವಾಗಿ ಹೇಳುತ್ತೇವೆ. ಇಂಡಿಯಾದ ದೇಶವಾಸಿಗಳಿಗೆ ನಿರ್ದಿಷ್ಟ ವೃತ್ತಿಗಳಲ್ಲಿ ತರಬೇತಿಯನ್ನು ನೀಡುವತ್ತ ಗಮನ ಹರಿಸಿದ ಶೈಕ್ಷಣಿಕ ಸಂಸ್ಥೆಗಳನ್ನು ನಾವು ಸದಾ ವಿಶೇಷ ಗೌರವದಿಂದ ಕಾಣುತ್ತೇವೆ. ಆ ಸಂಸ್ಥೆಗಳಿಗೆ ಎರಡು ಉದ್ದೇಶಗಳಿವೆ: ಸಾರ್ವಜನಿಕ ಸೇವೆಯಲ್ಲಿ ಅವರಿಗೆ ಉಪಯುಕ್ತವಾದ ಉದ್ಯೋಗಗಳನ್ನು ದೊರಕಿಸುವುದು ಮತ್ತು ಜೀವನದಲ್ಲಿ ಕ್ರಿಯಾಶೀಲವಾದ ಲಾಭದಾಯಕವಾದ ವೃತ್ತಿಗಳನ್ನು ಅನುಸರಿಸಲು ಅವರನ್ನು ಸಮರ್ಥರನ್ನಾಗಿಸುವುದು. ಇಂಡಿಯಾದ ವಿವಿಧ ಭಾಗಗಳಲ್ಲಿರುವ ವೈದ್ಯಕೀಯ ಕಾಲೇಜುಗಳು ಅದನ್ನು ಸಾಧಿಸಿ ತೋರಿಸಿವೆ. ಮೊದಲ ನೋಟದಲ್ಲಿ ಕಷ್ಟಗಳು ದುರ್ಭೇದ್ಯವೆಂದು ತೋರಿದರೂ ಔಷಧ ವೈದ್ಯಶಾಸ್ತ್ರ ಮತ್ತು ಶಸ್ತ್ರ ಚಕಿತ್ಸೆಯಲ್ಲಿ ಮಾಡಿದ ಅತ್ಯುನ್ನತ ಸಾಧನೆಗಳು ಇಂದು ಇಂಡಿಯಾದ ಸುಶಿಕ್ಷಿತ ದೇಶವಾಸಿಗಳ ಕೈಯಳತೆಯಲ್ಲಿವೆ. ಕಲ್ಕತ್ತ ಮತ್ತು ಬಾಂಬೆಯಲ್ಲಿರುವಂತಹ ವೈದ್ಯಕೀಯ ಕಾಲೇಜುಗಳ ಶಿಕ್ಷಣವನ್ನು ನೀಡುವ ಸ್ಥಳಗಳನ್ನು ಇಂಡಿಯಾದ ಇತರ ಸ್ಥಳಗಳಲ್ಲಿ ಸ್ಥಾಪಿಸಿ ಬೆಂಬಲಿಸಲು ಅಗತ್ಯವಾದ ನೆರವನ್ನು ನೀಡಲು ನಾವು ಸಿದ್ದರಾಗಿರಬೇಕು. ಆ ಕಾಲೇಜುಗಳಿಗೆ ಮತ್ತು ಸಿವಿಲ್ ಇಂಜಿನಿಯರಿಂಗ್ ತರಬೇತಿ ನೀಡುವ ಸಂಸ್ಥೆಗಳಿಗೆ ವಿದ್ಯಾರ್ಥಿಗಳನ್ನು ಒದಗಿಸುವ ವಿಧಾನವನ್ನು ಕುರಿತು ನಾವು ಈಗಾಗಲೇ ಪರೋಕ್ಷವಾಗಿ ಪ್ರಸ್ತಾವಿಸಿದ್ದೇವೆ.

80. ರೂರ್ಕಿಯಥಾಮ್‌ಸನ್ ಸಿವಿಲ್ ಇಂಜಿನಿಯರಿಂಗ್ ಕಾಲೇಜಿನ ಯಶಸ್ಸು ತೋರಿಸಿರುವುದೇನೆಂದರೆ, ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಪ್ರಾಯೋಗಿಕ ಶಿಕ್ಷಣ ನೀಡುವ ಅಂತಹ ಸ್ಥಳಗಳನ್ನು ಇಂಡಿಯಾದ ಇತರ ಪ್ರದೇಶಗಳಲ್ಲಿ ಸ್ಥಾಪಿಸುವುದು ಅತ್ಯಂತ ಉಚಿತವಾಗಿದೆ. ಅದರಿಂದ ಇಂಡಿಯಾದ ಆದ್ಯಂತ ಸರ್ಕಾರದ ಆಶ್ರಯದಲ್ಲಿ ಪ್ರಗತಿಯಲ್ಲಿರುವ ಮಹಾನ್ ಕಾರ್ಯಗಳನ್ನು ನಿರ್ವಹಿಸಲು ಸಮರ್ಥರಾದ ಜನರಿಗೆ ತರಬೇತಿ ನೀಡಬಹುದು. ಮತ್ತು ಈಗ ರೈಲ್ವೆ ಮತ್ತು ಸಾರ್ವಜನಿಕ ಕಾಮಗಾರಿ ವ್ಯವಸ್ಥೆಗಳು ಕ್ಷಿಪ್ರವಾಗಿ ವಿಸ್ತಾರ ಗೊಳ್ಳುತ್ತಿರುವುದರಿಂದ ಅಪಾರ ಸಂಖ್ಯೆಯ ಜನರಿಗೆ ಉದ್ಯೋಗಾವಕಾಶಗಳನ್ನು ತೆರೆಯಬಹುದು. ಅದರಲ್ಲೂ ವಿಶೇಷವಾಗಿ ಮದ್ರಾಸ್ ಪ್ರಾಂತ್ಯದಲ್ಲಿ ಅಂಥದ್ದೊಂದನ್ನು ಸ್ಥಾಪಿಸಬೇಕು. ಅಲ್ಲಿ ನೀರಾವರಿ ವ್ಯವಸ್ಥೆಯು ಬಹಳ ಅಗತ್ಯವಾಗಿದೆ. ದೇಶದ ಏಳಿಗೆಗಾಗಿಯಷ್ಟೇ ಅಲ್ಲ, ಬರ ಮತ್ತುಕ್ಷಾಮದಪರಿಸ್ಥಿತಿಯಲ್ಲಿ ಜನರ ಅಸ್ತಿತ್ವಕ್ಕೆ ಅದು ಅಗತ್ಯವಾಗಿದೆ. ವಿವಿಧ ಪ್ರಾಂತ್ಯಗಳ ಸಾರ್ವಜನಿಕ ಕಾಮಗಾರಿ ಕಮಿಷನರ್‌ಗಳ ಇತ್ತೀಚಿನ ವರದಿಗಳಲ್ಲಿ ಈ ವಿಷಯವನ್ನು ಪ್ರಧಾನವಾಗಿ ಎತ್ತಿ ತೋರಿಸಲಾಗಿದೆ. ಪ್ರಸ್ತುತತೀರ ಎದ್ದು ಕಾಣುತ್ತಿರುವ ಕೊರತೆಗಳನ್ನು ಪೂರೈಸಲು ತುರ್ತು ಕ್ರಮಗಳನ್ನು ಕೈಗೊಳ್ಳಲಾಗುತ್ತದೆ ಎಂದು ನಾವು ನಂಬುತ್ತೇವೆ.

81. ಮೂಲಭೂತವಾಗಿ ಪ್ರಾಯೋಗಿಕ ಸ್ವರೂಪದ ಈ ಎರಡು ದರ್ಜೆಗಳು ಸಂಸ್ಥೆಗಳು ಕೈಗಾರಿಕೆ ಮತ್ತು ವಿನ್ಯಾಸದ ಶಾಲೆಗಳಾಗಿವೆ. ಕಾಲದಿಂದ ಕಾಲಕ್ಕೆ ಅವುಗಳನ್ನು ಇಂಡಿಯಾದ ವಿವಿಧ ಭಾಗಗಳಲ್ಲಿ ಸ್ಥಾಪಿಸಲಾಗಿದೆ. ಡಾ. ಹಂಟರ್ ಮದ್ರಾಸಿನಲ್ಲಿ ಸ್ಥಾಪಿಸಿರುವ ಸಂಸ್ಥೆಯಿಂದ ಇತ್ತೀಚೆಗೆ ಒಂದು ಪ್ರೋತ್ಸಾಹದಾಯಕವಾದ ವರದಿಯನ್ನು ನಾವು ಸ್ವೀಕರಿಸಿದ್ದೇವೆ. ಸರ್‌ಜೆಮ್‌ಶೇಟ್ ಜೀಭಾಯ್ ಅವರು ತಮ್ಮ ರೂಢಿಯ ಔದಾರ್ಯದಿಂದ, ಬಾಂಬೆಯಲ್ಲಿ ಅಂತಹ ಶಾಲೆಯನ್ನು ಸ್ಥಾಪಿಸುವುದಾದರೆ ಗಣನೀಯ ಮೊತ್ತದ ದಾನವನ್ನು ಕೊಡುವುದಾಗಿ ಮುಂದೆ ಬಂದಿರುವ ಸುದ್ದಿಯೂ ನಮಗೆ ಬಂದಿದೆ. ಇಂತಹ ಸಂಸ್ಥೆಗಳು ಕೊನೆಯಲ್ಲಿ ಸ್ವಾವಲಂಬಿಗಳಾಗುತ್ತವೆ. ಆದರೆ ಅವುಗಳ ಸ್ಥಾಪನೆಗೆ ಅನುದಾನವನ್ನು ನೀಡುವ ಮೂಲಕ ನೆರವಾಗಲು ನಾವು ಸಿದ್ಧವಾಗಿದ್ದೇವೆ. ಮಾದರಿಗಳನ್ನು ಒದಗಿಸಲು ಮತ್ತು ಈ ದೇಶದಲ್ಲಿ ಇತ್ತೀಚಿನ ವರ್ಷಗಳಲ್ಲಿ ಈ ವಿಷಯದ ಕುರಿತು ನೀಡಲಾಗುತ್ತಿರುವ ಹೆಚ್ಚಿನ ಗಮನದ ಅನುಕೂಲವನ್ನು ಪಡೆದುಕೊಳ್ಳುವುದೇ ಮೊದಲಾದ ಇತರ ನೆರವನ್ನು ನೀಡಲು ನಾವು ಸಿದ್ಧರಾಗಿದ್ದೇವೆ. ಮದ್ರಾಸ್ ಶಾಲೆಯ ಪ್ರಗತಿಯನ್ನುಕುರಿತು ಮಿ. ರೆಡ್‌ಗ್ರೇವ್ ಅವರಿಂದ ನಾವು ಪಡೆದ ಒಂದು ವರದಿಯ ಪ್ರತಿಯನ್ನು ನಿಮಗೆ ಲಗತ್ತಿಸಿದ್ದೇವೆ. ಇಂಡಿಯದಲ್ಲಿ ಇನ್ನು ಮುಂದೆ ಸ್ಥಾಪಿಸಬಹುದಾದ ಇದೇ ಬಗೆಯ ಯಾವುದಾದರೂ ಸಂಸ್ಥೆಗಳ ಪ್ರಾಯೋಜಕರ ಪ್ರಯತ್ನಗಳಿಗೆ ಮಾರ್ಗದರ್ಶನ ನೀಡುವಲ್ಲಿ ಅದು ಅತ್ಯಂತ ಮೌಲಿಕವಾದ ಸಾಧನವಾಗಬಹುದು. ನಮಗೆ ತೃಪ್ತಿತಂದ ಸಂಗತಿ ಏನೆಂದರೆ ಪ್ರತಿ ಜಿಲ್ಲಾ ಶಾಲೆಗಳಲ್ಲಿ ಪ್ರಾಯೋಗಿಕ ಕೃಷಿಯನ್ನು ಬೋಧಿಸುವ ವಿಷಯವನ್ನು ಕುರಿತು ಇತ್ತೀಚೆಗೆ ಕಲ್ಕತ್ತದಲ್ಲಿರುವ ಶಿಕ್ಷಣ ಪರಿಷತ್ತು ನಿರ್ದೇಶನವನ್ನು ನೀಡಿದೆ. ಏಕೆಂದರೆ ಡಾ. ಅಲೌಟ್ ಅವರು ದಿಟವಾಗಿ ಗಮನಿಸಿದಂತೆ, ``ಇಂಡಿಯಾದ ವಿಶಾಲವಾದ ಗ್ರಾಮೀಣ ಸಮುದಾಯಕ್ಕೆ ಸುಧಾರಿತವಾದ ಒಂದು ಕೃಷಿ ಪದ್ಧತಿಯನ್ನು ಪರಿಚಯಿಸುವುದರಷ್ಟು ಅನುಕೂಲವು ಬೇರೆ ಯಾವುದೂ ಇರಲಾರದು.''

82. ಐರೋಪ್ಯ ಜ್ಞಾನವನ್ನು ಗಳಿಸಲು ಮಹಮದೀಯ ಸಮುದಾಯವು ತೋರುತ್ತಿರುವ ಹೆಚ್ಚಿನ ಅಪೇಕ್ಷೆಯು ನಮಗೆ ಅಪರಿಮಿತ ತೃಪ್ತಿಯನ್ನು ತಂದಿದೆ. ಬೆಂಗಾಲ್‌ನ ಶಿಕ್ಷಣ ಪರಿಷತ್ತು ಈ ವಿಷಯವನ್ನು ಪರಿಗಣಿಸುತ್ತಿದೆ ಎನ್ನುವುದನ್ನು ನಾವು ಗಮನಿಸಿದ್ದೇವೆ. ಇಂಡಿಯಾದ ದೇಶವಾಸಿಗಳ ಅಷ್ಟುದೊಡ್ಡ ಸಮುದಾಯದ ಅಗತ್ಯವನ್ನು ಒದಗಿಸಲು ನಿಮಗೆ ತೋರಬಹುದಾದ ಯಾವುದೇ ಪ್ರಸ್ತಾವವನ್ನು ನಾವು ಅನುಕೂಲಕರವಾಗಿ ಸ್ವೀಕರಿಸುತ್ತೇವೆ.

83. ಇಂಡಿಯಾದಲ್ಲಿ ಸ್ತ್ರೀಯರ ಶಿಕ್ಷಣದ ಮಹತ್ತ್ವವನ್ನು ಕಡೆಗಣಿಸಲಾಗುವುದಿಲ್ಲ. ಇಂಡಿಯಾದ ಅನೇಕ ದೇಶವಾಸಿಗಳು ತಮ್ಮ ಹೆಣ್ಣುಮಕ್ಕಳಿಗೆ ಒಂದು ಉತ್ತಮ ಶಿಕ್ಷಣವನ್ನು ಕೊಡಬೇಕೆಂಬ ಅತಿಯಾದ ಅಪೇಕ್ಷೆ ಹೊಂದಿರುವುದಕ್ಕೆ ದೊರೆತ ಸಾಕ್ಷಿಯನ್ನು ನಾವು ಸಂತೋಷದಿಂದ ಗಮನಿಸಿದ್ದೇವೆ. ಈ ವಿಧಾನದಿಂದ ಪುರುಷರ ಶಿಕ್ಷಣಕ್ಕಿಂತ ಹೆಚ್ಚಿನ ಪ್ರಮಾಣದ ಶೈಕ್ಷಣಿಕ ಮತ್ತು ನೈತಿಕತೆಯ ಸ್ಫೂರ್ತಿಯನ್ನು ಜನತೆಗೆ ನೀಡಿದಂತಾಗುತ್ತದೆ. ಅನುದಾನವನ್ನು ಕೊಡುವ ಶಾಲೆಗಳ ಪಟ್ಟಿಯಲ್ಲಿ ಹೆಣ್ಣುಮಕ್ಕಳ ಶಾಲೆಗಳನ್ನು ಸೇರಿಸಲಾಗಿದೆ ಎನ್ನುವುದನ್ನು ನಾವು ಈಗಾಗಲೇ ಗಮನಿಸಿದ್ದೇವೆ, ಮತ್ತು ಈ ನಿಟ್ಟಿನಲ್ಲಿ ಮಾಡಲಾದ ಪ್ರಯತ್ನಗಳಿಗೆ ನಮ್ಮ ಹೃತ್ಪೂರ್ವಕ ಸಹಾನುಭೂತಿಯನ್ನು ವ್ಯಕ್ತಪಡಿಸದೆ ಇರಲಾರೆವು. ಪರಿಷತ್ತಿನ ನಮ್ಮ ಗವರ್ನರ್ ಜನರಲ್ ಅವರು ಬೆಂಗಾಲ್ ಸರ್ಕಾರಕ್ಕೆ ಕಳುಹಿಸಿದ ಒಂದು ಸಮಾಚಾರದಲ್ಲಿಇಂಡಿಯಾದಲ್ಲಿ ದೇಶವಾಸಿ ಮಹಿಳಾ ಶಿಕ್ಷಣಕ್ಕೆ ಯಥಾರ್ಥವಾದ ಮತ್ತು ಹೃತ್ಪೂರ್ವಕವಾದ ಬೆಂಬಲವನ್ನು ಸರ್ಕಾರವು ಕೊಡಬೇಕು ಎಂದು ಘೋಷಿಸಿದ್ದಾರೆ. ಇದಕ್ಕೆ ನಮ್ಮ ಹೃತ್ಪೂರ್ವಕ ಸಮ್ಮತಿಯನ್ನು ನೀಡುತ್ತೇವೆ. ರಾವ್ ಬಹದ್ದೂರ್ ಮಘುವಭಾಯಿ ಕರಮ್‌ಚಂದ್‌ರಂಥ ಸ್ಥಳೀಯ ಸಜ್ಜನರು ಅಹಮದಾಬಾದಿನಲ್ಲಿ ಎರಡು ದೇಶೀಯ ಹೆಣ್ಣುಮಕ್ಕಳ ಶಾಲೆಗಳನ್ನು ಸ್ಥಾಪಿಸಲು ರೂ. 20,000ವನ್ನು ಮುಡಿಪಾಗಿಟ್ಟಿರುವುದಕ್ಕೆ ವಿಶೇಷವಾದ ಗೌರವವನ್ನು ಸಲ್ಲಿಸುವುದನ್ನು ನಾವು ಅನುಮೋದಿಸುತ್ತೇವೆ. ಅಂತಹ ಉಪಕ್ರಮಗಳಿಂದ ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ವಿಸ್ತರಿಸಬೇಕೆಂಬ ನಮ್ಮ ಅಪೇಕ್ಷೆಯು ಸಾಮಾನ್ಯವಾಗಿ ಎಲ್ಲರ ಗಮನಕ್ಕೂ ಬರುತ್ತದೆ.

84. ಸರ್ಕಾರಿ ಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕುರಿತಂತೆ ನಮ್ಮಅಭಿಪ್ರಾಯದ ಬಗೆಗೆ ಗಣನೀಯವಾದ ತಪ್ಪುಗ್ರಹಿಕೆ ಇರುವಂತೆ ತೋರುತ್ತದೆ. ಆ ಸಂಸ್ಥೆಗಳನ್ನು ಇಂಡಿಯಾದ ಇಡೀ ಜನಸಮುದಾಯದ ಪ್ರಯೋಜನಕ್ಕಾಗಿ ಸ್ಥಾಪಿಸಲಾಗಿತ್ತು. ಅವುಗಳ ಉದ್ದೇಶವನ್ನು ಕಾರ್ಯಗತಗೊಳಿಸಲು ಅವುಗಳಲ್ಲಿ ನೀಡಲಾಗುವ ಶಿಕ್ಷಣವು ಕೇವಲ ಸೆಕ್ಯುಲರ್ ಆಗಿರಬೇಕು ಎನ್ನುವುದು ಅನಿವಾರ್ಯವಾಗಿತ್ತು ಮತ್ತು ಅನಿವಾರ್ಯವಾಗಿದೆ. ಕಾಲೇಜುಗಳು ಮತ್ತು ಶಾಲೆಗಳ ಪುಸ್ತಕ ಭಂಡಾರಗಳಲ್ಲಿ ಬೈಬಲ್ ಗ್ರಂಥವನ್ನು ಇರಿಸಲಾಗಿದೆ ಎಂದು ನಮಗೆ ತಿಳಿದು ಬಂದಿದೆ ಮತ್ತು ವಿದ್ಯಾರ್ಥಿಗಳು ಅದನ್ನು ಮುಕ್ತವಾಗಿ ಪರಾಮರ್ಶಿಸಬಹುದಾಗಿದೆ. ಇದು ಹೀಗೆಯೇ ಇರಬೇಕಾದದ್ದು. ವಿದ್ಯಾರ್ಥಿಗಳು ಸ್ವಂತಇಚ್ಛೆಯಿಂದ ಕ್ರೈಸ್ತಧರ್ಮದ ವಿಷಯಕ್ಕೆ ಸಂಬಂಧಿಸಿದ ಯಾವುದೇ ವಿವರಣೆಯನ್ನು ತಮ್ಮ ಉಪಾಧ್ಯಾಯರ ಬಳಿ ಕೇಳಬಹುದು. ಅದನ್ನು ತಡೆಯಲು ಅಥವಾ ನಿರುತ್ಸಾಹಗೊಳಿಸಲು ನಮಗೆ ಯಾವ ಅಪೇಕ್ಷೆಯೂ ಇಲ್ಲ. ಒಂದೇ ನಿಬಂಧನೆ ಎಂದರೆ ಅಂತಹ ಮಾಹಿತಿಯನ್ನು ಶಾಲಾ ಅವಧಿಯ

ಅನಂತರ ನೀಡಬೇಕು. ಅಂತಹ ಶಿಕ್ಷಣವು ಎರಡೂ ಪಕ್ಷಗಳಿಗೆ ಸಂಪೂರ್ಣವಾಗಿ ಸ್ವಯಂಪ್ರೇರಿತವಾಗಿರುತ್ತದೆ. ಮತ ಪರಿವರ್ತನೆ ಮಾಡುವ ಉದ್ದೇಶದಿಂದ ಸರ್ಕಾರದ ಪ್ರಭಾವವನ್ನು ನಾವು ಉಪಯೋಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆ ಎಂಬ ಅತ್ಯಂತ ಸಣ್ಣ ಸಂಶಯಕ್ಕೆ ಕೂಡ ಎಡೆಮಾಡಿಕೊಡದಂತೆ ಪರಿಶೀಲಕರು (ಇನ್ಸ್‌ಪೆಕ್ಟರುಗಳು) ತಮ್ಮ ನಿಯತಕಾಲಿಕ ಭೇಟಿಗಳ ಸಮಯದಲ್ಲಿ ಅದನ್ನು ನಿರ್ಲಕ್ಷಿಸಬೇಕು.

85. ಇಂಡಿಯಾದಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವ ಯೋಜನೆಯ ಉದ್ದೇಶದ ರೂಪರೇಷೆಯನ್ನು ಈಗ ಒದಗಿಸಿದ ಅನಂತರ ಅದನ್ನು ಕ್ರಮೇಣ ಕಾರ್ಯರೂಪಕ್ಕೆ ತರಬೇಕು ಎಂದು ಹೇಳುತ್ತಾ, ಅನೇಕ ಪ್ರಾಂತ್ಯಗಳಲ್ಲಿರುವ ಶಿಕ್ಷಣದ ಸ್ಥಿತಿಗತಿಗಳನ್ನು ಕುರಿತು ಕೆಲವು ಅವಲೋಕನಗಳನ್ನು ಮಾಡಲು ನಾವು ಈಗ ಮುಂದುವರಿಯುತ್ತೇವೆ. ತಮ್ಮಲ್ಲೇ ಪರಸ್ಪರ ಬಹುತೇಕ ಅಪೂರ್ಣವಾಗಿರುವ ನಮ್ಮ ಸಾಮಾನ್ಯ ಯೋಜನೆಗಳ ಭಾಗಗಳನ್ನು ಎತ್ತಿತೋರಿಸುತ್ತೇವೆ.

86. ಇಂಗ್ಲಿಷ್ ಭಾಷಾ ಮಾಧ್ಯಮದ ಮೂಲಕ ಶಿಕ್ಷಣವನ್ನು ನೀಡುವುದರಲ್ಲಿ ಬೇರೆ ಯಾವುದೇ ಭಾಗಕ್ಕಿಂತ ಬೆಂಗಾಲವು ಬಹಳ ಮೇಲಕ್ಕೇರಿದೆ. .ಅಂತಹ ಶಿಕ್ಷಣಕ್ಕೆ ಬೇಡಿಕೆ ಹೆಚ್ಚಾಗುತ್ತಿರುವುದನ್ನು ಮತ್ತುಅದನ್ನು ಪಡೆಯಲು ವಿವಿಧ ಜಿಲ್ಲೆಗಳ ದೇಶವಾಸಿಗಳು ಪರಿಶ್ರಮಪಡಲು ಸಿದ್ಧರಾಗಿರುವುದನ್ನು ಕುರಿತು ನಮಗೆ ನಿರಂತವಾಗಿ ಪುರಾವೆಗಳು ದೊರೆಯುತ್ತಿರುವುದಕ್ಕೆ ಸಂತೋಷವಾಗಿದೆ. ಈಗ ಐದು ಸರ್ಕಾರಿ ಆಂಗ್ಲೊ-ವರ್ನಾಕ್ಯುಲರ್ ಕಾಲೇಜುಗಳಿವೆ. ಜಿಲ್ಲಾ ಶಾಲೆಗಳನ್ನು ಬಹುತೇಕ ಪ್ರತಿಯೊಂದು ಜಿಲ್ಲೆಯಲ್ಲಿಯೂ ಸ್ಥಾಪಿಸಲಾಗಿದೆ. ಅನುದಾನ ಪದ್ಧತಿಯನ್ನು ಪ್ರಾರಂಭಿಸಿರುವುದರಿಂದ ಶ್ರೇಷ್ಠ ದರ್ಜೆಯ ಶಾಲೆಗಳ ಸಂಖ್ಯೆಯು ಬಹಳ ದೊಡ್ಡ ಪ್ರಮಾಣದಲ್ಲಿ ಹೆಚ್ಚಳವಾಗುತ್ತದೆ ಎಂದು ನಾವು ದೃಢ ಭರವಸೆಯಿಂದ ನಿರೀಕ್ಷಿಸುತ್ತೇವೆ. ಅನತಿಕಾಲದಲ್ಲಿಯೇ ಸರ್ಕಾರಿಸಂಸ್ಥೆಗಳಿಗೆ ಸೇರದಮಧ್ಯಮ ಮತ್ತು ಉನ್ನತ ತರಗತಿಗಳ ಶಿಕ್ಷಣವನ್ನು ದೇಶದ ಅನೇಕ ಭಾಗಗಳಲ್ಲಿ ಅಸ್ತಿತ್ವಕ್ಕೆ ತರಲು ಅಗತ್ಯ ಸವಲತ್ತುಗಳು ನಿರ್ಮಾಣವಾಗುತ್ತವೆ ನಾವು ಆಶಿಸುತ್ತೇವೆ. ಅನಂತರ ಬರ್ದ್ವಾನ್‌ನ ರಾಜನ ಪ್ರಾಜ್ಞನಡವಳಿಕೆಯ ಪರಿಣಾಮವಾಗಿ ಬರ್ದ್ವಾನ್‌ನಲ್ಲಿ ಆಗಲೇ ಮಾಡಿದಂತೆ ಸರ್ಕಾರಿ ಸಂಸ್ಥೆಗಳನ್ನು ಮುಚ್ಚಬಹುದು ಅಥವಾ ಅವುಗಳನ್ನು ಸ್ಥಳೀಯ ನಿರ್ವಹಣೆಗೆ ವರ್ಗಾಂತರಿಸಬಹುದು.

87. ಆದಾಗ್ಯೂ, ಬೆಂಗಾಲಿನಲ್ಲಿ ಜನಸಮುದಾಯದ ಶಿಕ್ಷಣಕ್ಕೆ ಇಲ್ಲಿಯವರೆಗೂ ಮಾಡಿರುವುದು ಅತ್ಯಂತ ಕಡಮೆ. ಅದರಲ್ಲೂ ವಿಶೇಷವಾಗಿ ಅವರ ದೇಶೀಯ ಭಾಷೆಗಳ ಮಾಧ್ಯಮದಲ್ಲಿ ಅವರ ಶಿಕ್ಷಣಕ್ಕೆ ಮಾಡಿರುವುದು ಕಡಮೆಯೇ. 1844ರಲ್ಲಿ ಕೆಲವು ವರ್ನಾಕ್ಯುಲರ್ ಶಾಲೆಗಳನ್ನು ಸರ್ಕಾರವು ಸ್ಥಾಪಿಸಿತ್ತು. ಅವುಗಳ ಪೈಕಿ ಈಗ 33 ಮಾತ್ರ ಉಳಿದಿವೆ. ಅವುಗಳಲ್ಲಿ 1,400 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. 1852ರ ಏಪ್ರಿಲ್ ತಿಂಗಳಿನಲ್ಲಿ ಅವರನ್ನು ಕಂದಾಯ ಮಂಡಲಿಯಆಶ್ರಯದಿಂದ ಶಿಕ್ಷಣ ಮಂಡಲಿಗೆ ವರ್ಗಾವಣೆ ಮಾಡಿದಮೇಲೆ, ಅವರು ದುಃಸ್ಥಿತಿಯಲ್ಲಿರುವಂತೆ ತೋರುತ್ತದೆ ಮತ್ತು ಅವುಗಳನ್ನು ಸ್ಥಾಪಿಸುವಾಗ ಇದ್ದ ನಿರೀಕ್ಷೆಯನ್ನು ಈಡೇರಿಸಿಲ್ಲ.

88. ಅಸ್ಸಾಮ್ ಶಾಲೆಗಳ ಪರಿಶೀಲಕ ಮಿ. ರಾಬಿನ್‌ಸನ್‌ಅವರ ವರದಿಯನ್ನು ವಿಶೇಷ ಕುತೂಹಲದಿಂದ ನಾವು ಅವಲೋಕಿಸಿದ್ದೇವೆ. ಅಲ್ಲಿ 74 ಶಾಲೆಗಳಿದ್ದು

3,000ಕ್ಕಿಂತ ಹೆಚ್ಚಿನ ವಿದ್ಯಾರ್ಥಿಗಳು ಇರುವಂತೆ ತೋರುತ್ತದೆ. ಆ ಶಾಲೆಗಳನ್ನು ನಿರ್ವಹಿಸಲಾಗುತ್ತಿರುವ ವ್ಯವಸ್ಥೆಯನ್ನು ಸುಧಾರಿಸಲು ಮಿ. ರಾಬಿನ್‌ಸನ್ ಅವರ ಸಲಹೆಗಳು ಪರಿಗಣನೆಗೆ ಅರ್ಹವೆಂದು ನಮಗೆ ತೋರುತ್ತವೆ. ವಾಯವ್ಯ ಪ್ರಾಂತ್ಯಗಳಲ್ಲಿ ಯಾವ ನಿಯಮವನ್ನು ಆಧರಿಸಿ ದೇಶಿಯ ಭಾಷೆಯ ಮೂಲಕ ಶಿಕ್ಷಣ ನೀಡುವುದನ್ನು ಉತ್ತೇಜಿಸಲಾಗುತ್ತಿದೆಯೋ ಅದನ್ನೇಬಹುತೇಕ ಅನುಸರಿಸುವುದು ಸೂಕ್ತವೆಂದು ತೋರುತ್ತದೆ. ಮಿ. ರಾಬಿನ್‌ಸನ್ ಅವರ ಅಭಿಪ್ರಾಯಗಳನ್ನು ಅನುಷ್ಠಾನಕ್ಕೆ ತರುವಲ್ಲಿನೀವು ಯಾವಕ್ರಮಗಳನ್ನು ಅನುಮೋದಿಸುತ್ತೀರೋ ಅವನ್ನು ಮಂಜೂರು ಮಾಡಲು ನಾವು ಸಿದ್ಧವಾಗಿರಬೇಕಿದೆ.

89. ಆದರೆ ದೇಶೀಯ ಶಾಲೆಗಳನ್ನು ಮತ್ತು ಕೆಳವರ್ಗದ ಶಿಕ್ಷಣವನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿಒಂದಷ್ಟು ಯೋಜನೆಗಳನ್ನು ಗುರುತಿಸಲು ಬೆಂಗಾಲ್ ಸರ್ಕಾರವು ಗಂಭೀರವಾಗಿಗಮನ ಹರಿಸಬೇಕು. ವಾಯವ್ಯ ಪ್ರಾಂತ್ಯದಲ್ಲಿ ಮಿ. ಥಾಮ್‌ಸನ್ ಮಾಡಿದಂತೆ ಶಿಕ್ಷಣದ ಪ್ರಯೋಜನಗಳನ್ನು ಕೆಳವರ್ಗದವರ ಮುಂದೆ ಪ್ರಾಯೋಗಿಕವಾಗಿ ಇಡಬಹುದು ಮತ್ತು ಅವರ ಪ್ರಯತ್ನಗಳಿಗೆ ನೆರವಾಗಬಹುದು ಮತ್ತು ನಿರ್ದೇಶನ ನೀಡಬಹುದು. ಆಗ್ರಾ ಸರ್ಕಾರವು ಜನರ ಶಿಕ್ಷಣ ಮಟ್ಟವನ್ನು ಸುಧಾರಿಸಲು ಕೃಷಿ ತರಗತಿಗಳನ್ನು ಅಳವಡಿಸಿಕೊಳ್ಳುವ ಹಿಂದಿನ ಉದ್ದೇಶವು ನಮಗೆ ಅರಿವಾಗಿದೆ, ಆದರೆ ಅದು ಬೆಂಗಾಲ್‌ನಲ್ಲಿ ಅಸ್ತಿತ್ವದಲ್ಲಿಲ್ಲ. ಆದರೆ ಪ್ರಾಥಮಿಕ ಹಂತದಜ್ಞಾನಕ್ಕೆ ಗಮನಕೊಡುವುದರಿಂದ ಬೇರೆ ಅಂತಹ ಘನವಾದ ಅನುಕೂಲಗಳು ದೊರೆಯಬಹುದೇ ಎಂದು ಶಂಕಿಸಲಾಗುವುದಿಲ್ಲ. ಅದನ್ನು ಬೆಂಗಾಲ್‌ನ ಕೆಳವರ್ಗದ ಜನರ ಅರಿವು ಮತ್ತು ಆಸಕ್ತಿಗಳಿಗೆ ಪ್ರಾಯೋಗಿಕವಾಗಿ ಮತ್ತು ಸರಳವಾಗಿ ಸ್ಪಷ್ಟಗೊಳಿಸಬಹುದು.

90. ಬೆಂಗಾಲ್‌ನ ಓರಿಯೆಂಟಲ್ ಕಾಲೇಜುಗಳಲ್ಲಿ ಅನುಸರಿಸಲಾಗುತ್ತಿರುವ ಅಧ್ಯಯನದ ಯೋಜನೆಯು ಶಿಕ್ಷಣ ಮಂಡಲಿಯ ಪರಿಗಣನೆಯ ಅಡಿಯಲ್ಲಿದೆ ಎಂಬುದನ್ನು ನಾವು ಗ್ರಹಿಸಿದ್ದೇವೆ. ಅವು ಅತೃಪ್ತಿಕರವಾದ ಪರಿಸ್ಥಿತಿಯಲ್ಲಿವೆ ಎಂದು ತೋರುತ್ತದೆ. ನಾವು ಈಗಾಗಲೇ ಆ ಕಾಲೇಜುಗಳಿಗೆ ನಮ್ಮ ಅಭಿಪ್ರಾಯಗಳನ್ನು ಸಾಕಷ್ಟು ಸೂಚಿಸಿದ್ದೇವೆ. ಅವು ಹೆಚ್ಚಿನ ಪ್ರಾಯೋಗಿಕ ಉಪಯೋಗದಿಂದಭದ್ರವಾಗಿ ನೆಲೆ ನಿಲ್ಲುವುದನ್ನು ನೋಡಲು ನಮಗೆ ಸಂತೋಷವಾಗಬೇಕು. ನಿಮ್ಮ 5ನೇ ಮೇ ದಿನಾಂಕದ ಪತ್ರದಲ್ಲಿ ನೀವು ಉಲ್ಲೇಖಿಸಿದ ಅಂಶಗಳು ಕಲ್ಕತ್ತದ ಪ್ರೆಸಿಡೆನ್ಸಿ ಕಾಲೇಜಿಗೆ ಸಂಬಂಧಿಸಿದವಾಗಿದ್ದು, ಅವು ಪ್ರತ್ಯೇಕ ಸಮಾಚಾರದ ವಿಷಯವಾಗುತ್ತವೆ.

91. ವಾಯವ್ಯ ಪ್ರಾಂತ್ಯಗಳಲ್ಲಿ ಶಿಕ್ಷಣದ ಬೇಡಿಕೆಯು ಎಷ್ಟು ಪರಿಮಿತವಾಗಿದೆಯೆಂದರೆ, ಲೆಫ್ಟಿನೆಂಟ್ ಗವರ್ನರ್‌ತಮ್ಮ ಹಿಂದಿನ ವರದಿಗಳಲ್ಲಿ ಅದರ ಸನ್ನಿವೇಶಗಳನ್ನು ವಿವರವಾಗಿ ತಿಳಿಸಿದ್ದಾರೆ. ಪ್ರಾಯಃ ಅನತಿ ಕಾಲದಲ್ಲಿಯೇ ಖಾಸಗಿ ಪ್ರಯತ್ನವು ಸಂಸ್ಥೆಯ ಸ್ಥಾಪನೆಗೆ ಸ್ಥಳವನ್ನು ಕೊಡುವಷ್ಟು ಶಕ್ತಿಶಾಲಿಯಾಗಿ ಬೆಳೆಯಬಹುದು. ಸರ್ಕಾರವು ಅತ್ಯುನ್ನತ ಶ್ರೇಣಿಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು ಸಾಕಷ್ಟು ಕಾರಣವಿರುವಲ್ಲಿ ಅವುಗಳ ಬೆಂಬಲ ಮತ್ತು ನಿರ್ವಹಣೆಯನ್ನು ಮಾಡುತ್ತದೆ.

92. ಅದೇ ಸಮಯದಲ್ಲಿ, ದೇಶೀಯ ಶಾಲೆಗಳ ಪರಿಶೀಲನೆ ಮತ್ತು ಪ್ರೋತ್ಸಾಹದ ಮೂಲಕ ದೇಶಾದ್ಯಂತ ಸಾಮಾನ್ಯ ಶಿಕ್ಷಣದ ಪ್ರಗತಿಗೆ ಅಳವಡಿಸಿಕೊಂಡ

ವ್ಯವಸ್ಥೆಯು ಕೆಳವರ್ಗಗಳ ಜನರ ಶಿಕ್ಷಣದಲ್ಲಿ ಮಹಾನ್ ಪ್ರಗತಿಯನ್ನು ಸಾಧಿಸಲು ಅಸ್ತಿವಾರವನ್ನು ಹಾಕಿದೆ. ಅಜ್ಞಾನದಅಂಧಕಾರದಲ್ಲಿಜನರು ಶೋಚನೀಯವಾಗಿ ಮುಳುಗಿಹೋಗಿರುವುದನ್ನು ಮಿ. ಥಾಮ್‌ಸನ್‌ಅವರು ಅಂಕಿಅಂಶಗಳ ಆಧಾರದಿಂದ ಖಚಿತಪಡಿಸಿದ್ದಾರೆ. ವಾಯವ್ಯ ಪ್ರಾಂತ್ಯಗಳ ಕಂದಾಯ ಇತ್ಯರ್ಥ ನಿಯಮದ ಪ್ರಕಾರ ಭೂಮಿಯನ್ನು ನೋಂದಾಯಿಸುವುದು ಆವಶ್ಯಕವಾದುದರಿಂದ ಕನಿಷ್ಠ ಪಕ್ಷ ಓದುವುದು, ಬರೆಯುವುದು, ಸರಳವಾದ ಗಣಿತ ನಿಯಮಗಳು ಮತ್ತು ಜಮೀನಿನ ಅಳತೆ ಇವುಗಳ ಪರಿಚಯವು ಪ್ರತಿಯೊಬ್ಬನಿಗೂ ಅನಿವಾರ್ಯವಾಗುತ್ತದೆ. ಇದುಜ್ಞಾನವನ್ನು ಸಂಪಾದಿಸುವುದಕ್ಕೆ ನೇರವಾದಆಸಕ್ತಿಯನ್ನು ಪ್ರಚೋದಿಸುತ್ತದೆ ಹಾಗೂ ಪ್ರತೀವ್ಯಕ್ತಿಯೂ ತನ್ನ ಹಕ್ಕುಗಳನ್ನು ರಕ್ಷಸಿಕೊಳ್ಳಲು ಅದು ಸಾಮರ್ಥ್ಯವನ್ನು ನೀಡುತ್ತದೆ ಎಂದು ಅವರಿಗೆ ತೋರಿದೆ.

93. ಆದ್ದರಿಂದ ಅವರು ದೇಶೀಯ ಶಾಲೆಗಳನ್ನು ಉತ್ತೇಜಿಸುವ ಒಂದು ವ್ಯವಸ್ಥೆಯನ್ನು ಸಂಘಟಿಸಿದರು. ಒಬ್ಬ ವಿಸಿಟರ್-ಜನರಲ್‌ರವರ ಮೇಲ್ವಿಚಾರಣೆಯಲ್ಲಿ ಜಿಲ್ಲಾ ಮತ್ತು ಪರಗಣ ಸಂದರ್ಶಕರಿಂದ ನಿರಂತರವಾಗಿ ಪರಿಶೀಲನೆಯನ್ನು ಏರ್ಪಡಿಸಿದರು. ಅಲ್ಲದೆ ಪ್ರತಿಯೊಬ್ಬ ತಹಸೀಲ್ದಾರನ ಕೇಂದ್ರಕಾರ್ಯಾಲಯದಲ್ಲೂ ``ಉರ್ದು ಮತ್ತು ಹಿಂದಿ ಸೇರಿದಂತೆ ಎರಡು ದೇಶೀಯ ಭಾಷೆಗಳನ್ನೂ ಓದುವುದು ಮತ್ತು ಬರೆಯುವುದು, ಮತ್ತು ಜಮೀನಿನ ಅಳತೆ''ಗೆ ಸಂಬಂಧಿಸಿದಂತೆ ಬೋಧಿಸುವ ಉದ್ದೇಶದಿಂದ ಒಂದು ಶಾಲೆಯನ್ನು ಸ್ಥಾಪಿಸಲಾಯಿತು. ಒಂದು ಶಾಲಾ ಕಟ್ಟಡವನ್ನು ಸರ್ಕಾರವು ಒದಗಿಸಿತು. ತಹಸೀಲ್ ಶಾಲೆಗಳ ಉಪಾಧ್ಯಾಯರು ಒಂದು ಸಣ್ಣ ಮೊತ್ತದ ಸಂಬಳವನ್ನು ಪಡೆಯುತ್ತಿದ್ದರು. ಅಲ್ಲದೆ ವಿದ್ಯಾರ್ಥಿಗಳು ನೀಡುತ್ತಿದ್ದ ಬೋಧನಾ ಶುಲ್ಕ ಅವರಿಗೇ ಸಂದಾಯವಾಗುತ್ತಿತ್ತು. ಈ ವಿದ್ಯಾರ್ಥಿಗಳು ಯಾರೂ ಸಮರ್ಥನೀಯವಾದ ಶಿಕ್ಷಣವನ್ನು ಪಡೆದವರಾಗಿರುತ್ತಿರಲಿಲ್ಲ. ಇದಕ್ಕೆ ಹೊರತಾಗಿ, ``ಸಂದರ್ಶಕರ ಪಟ್ಟಿಯಲ್ಲಿಇರಬಹುದಾದ ಗ್ರಾಮದ ಶಾಲಾ ಉಪಾಧ್ಯಾಯರು ಶಿಫಾರಸು ಮಾಡಿದವರುಇರುತ್ತಿದ್ದರು.'' ಅರ್ಹ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳಿಗೆ ಪುರಸ್ಕಾರವನ್ನು ನೀಡುವುದಕ್ಕಾಗಿ ಪ್ರತಿಜಿಲ್ಲೆಗೂಒಂದು ನಿರ್ದಿಷ್ಟವಾದ ಮೊತ್ತವನ್ನು ವಾರ್ಷಿಕವಾಗಿ ಮೀಸಲಿಡಲಾಗುತ್ತಿತ್ತು; ಮತ್ತು ದೇಶೀಯ ಭಾಷೆಯಲ್ಲಿ ಪ್ರಾಥಮಿಕ ಹಂತದ ಶಾಲಾ ಪುಸ್ತಕಗಳನ್ನು ಸಿದ್ಧಪಡಿಸಲು ವಿಸಿಟರ್-ಜನರಲ್ ಅವರ ಗಮನವನ್ನು ಖಚಿತವಾಗಿ ನಿರ್ದೇಶಿಸಲಾಗುತ್ತಿತ್ತು. ಅವುಗಳನ್ನು ಜಿಲ್ಲಾ ಮತ್ತು ಪರಗಣ ಸಂದರ್ಶಕರ ಸೇವಾ ಸಂಸ್ಥೆಗಳ ಮೂಲಕ ಮಾರಲಾಗುತ್ತಿತ್ತು. ಇಂತಹಯಾವುದಾದರೊಂದು ವ್ಯವಸ್ಥೆಯನ್ನು ಆಗ್ರಾ ಪ್ರಾಂತ್ಯದ ಇತರ ಜಿಲ್ಲೆಗಳಿಗೂ ಕ್ರಮೇಣ ವಿಸ್ತರಿಸಲು ಮಂಜೂರಾತಿಯನ್ನು ನೀಡಲು ನಾವು ಸಿದ್ಧರಾಗಿದ್ದೇವೆ. ನಾವು ಈಗಾಗಲೇ ಅದನ್ನು ಒಂದು ಮಾದರಿಯೆಂದು ಉಲ್ಲೇಖಿಸಿದ್ದೇವೆ. ಇತರ ಪ್ರಾಂತ್ಯಗಳ ಪ್ರಯತ್ನಗಳು ಅದೇ ಉದ್ದೇಶವನ್ನು ಸಾಧಿಸಲು ಈ ಮಾದರಿಯಿಂದ ಮಾರ್ಗದರ್ಶನವನ್ನು ಪಡೆಯಬೇಕು.

94. ಬಾಂಬೆ ಪ್ರಾಂತ್ಯದಲ್ಲಿ ಆಂಗ್ಲೊ-ವರ್ನಾಕ್ಯುಲರ್ ಕಾಲೇಜುಗಳಲ್ಲಿ ನೀಡಲಾಗುತ್ತಿರುವ ಶಿಕ್ಷಣದ ಗುಣಲಕ್ಷಣವು ತೀರ ಅಲ್ಲದಿದ್ದರೂ ಬಹತೇಕ ಬೆಂಗಾಲ್‌ನ ಶಿಕ್ಷಣಕ್ಕೆ ಸಮಾನವಾಗಿದೆ. ಅನುದಾನ ನಿಯಮದ ಅಡಿಯಲ್ಲಿ

ನೀಡಲಾಗುತ್ತಿರುವ ಕಾಲೇಜುಗಳಲ್ಲಿ ಎಲ್ಫಿನ್‌ಸ್ಟೋನ್ ಸಂಸ್ಥೆಯು ಒಂದು ಉದಾಹರಣೆಯಾಗಿದೆ. ಅಂತಹ ಪ್ರಯತ್ನವುಇನ್ನೂ ವ್ಯಾಪಕವಾಗಿ ನಡೆಯಬೇಕುಎನ್ನುವುದು ನಮ್ಮಅಪೇಕ್ಷೆಯಾಗಿದೆ. ಬಾಂಬೆಯಲ್ಲಿ ದೇಶೀಯ ಭಾಷೆಗಳ ಮಾಧ್ಯಮದಲ್ಲಿ ಶಿಕ್ಷಣವನ್ನು ನೀಡಲು ಗಣನೀಯವಾದ ಗಮನವನ್ನು ನೀಡಲಾಗಿದೆ. ಶಿಕ್ಷಣ ಮಂಡಲಿಯ ನಿರ್ವಹಣೆಯ ಅಡಿಯಲ್ಲಿ 216 ವರ್ನಾಕ್ಯುಲರ್ ಶಾಲೆಗಳು ಇವೆ ಎಂದು ತೋರುತ್ತದೆ, ಮತ್ತು ಅವುಗಳಿಗೆ ಹಾಜರಾಗುವ ವಿದ್ಯಾರ್ಥಿಗಳ ಸಂಖ್ಯೆ 12,000ಕ್ಕಿಂತಲೂ ಹೆಚ್ಚಾಗಿತ್ತು. ಜಿಲ್ಲಾ ಶಾಲೆಗಳಲ್ಲಿ ಮೂವರು ಪರಿಶೀಲಕರು (ಇನ್‌ಸ್ಪೆಕ್ಟರ್) ಇದ್ದಾರೆ. ಅವರಲ್ಲಿ ಒಬ್ಬರು ಇಂಡಿಯಾದ ದೇಶವಾಸಿ (ಮಹದೇವ ಗೋವಿಂದಶಾಸ್ತ್ರಿ). ಈ ಶಾಲೆಗಳು ಸುಧಾರಿಸುತ್ತಿವೆ ಎಂದು ವರದಿಯಾಗಿದೆ. ಸರ್ಕಾರಿ ಕಾಲೇಜುಗಳಲ್ಲಿ ತರಬೇತಿಯನ್ನು ಪಡೆದ ಉಪಾಧ್ಯಾಯರನ್ನು ಇತ್ತೀಚೆಗೆ ಈ ಶಾಲೆಗಳಲ್ಲಿ ಕೆಲವಕ್ಕೆ ನೇಮಿಸಲಾಗಿದೆ. ಅದರ ಪರಿಣಾಮ ಅತ್ಯಂತ ಸಂತೋಷಕರವಾಗಿದೆ. ಇಲ್ಲಿಯ ಫಲಿತಾಂಶಗಳು ಬಾಂಬೆ ಪ್ರಾಂತ್ಯಕ್ಕೆ ಕೀರ್ತಿದಾಯಕವಾಗಿವೆ. ಈಗ ಪ್ರತಿಯೊಂದು ಸರ್ಕಾರಿ ಶಾಲೆಯನ್ನೂ ಒಂದು ಕೇಂದ್ರವನ್ನಾಗಿ ಮಾಡಲಾಗುತ್ತದೆ ಎಂದು ನಾವು ನಂಬುತ್ತೇವೆ. ಅಲ್ಲಿಂದ ನೆರೆಹೊರೆಯ ಜಿಲ್ಲೆಗಳ ದೇಶೀಯ ಶಾಲೆಗಳನ್ನು ಪರಿಶೀಲಿಸಬಹುದು ಮತ್ತು ಪ್ರೋತ್ಸಾಹಿಸಬಹುದು.

95. ಹೊಸ ಕಂದಾಯ ಇತ್ಯರ್ಥವನ್ನು ಬಾಂಬೆ ಪ್ರಾಂತ್ಯಕ್ಕೆ ವಿಸ್ತರಿಸಿರುವುದರಿಂದ ಮಿ. ಥಾಮ್ಸನ್ ಅವರು ಯಾವ ಸನ್ನಿವೇಶದ ಲಾಭವನ್ನು ಪಡೆದರೋ ಅದಕ್ಕೆ ಅನುರೂಪವಾದ ಪ್ರಚೋದನೆಯೊಂದು ಇಲ್ಲೂ ಕಂಡುಬರುತ್ತದೆ ಎಂಬುದು ನಮ್ಮ ಗ್ರಹಿಕೆ. ಕೃಷಿಕವರ್ಗದವರು ಗ್ರಾಮ ಲೆಕ್ಕಿಗರು ನೀಡುವ ವರದಿಯನ್ನು ಪರೀಕ್ಷಿಸುವಷ್ಟಾದರೂ ಜ್ಞಾನ ಸಂಪಾದನೆ ಮಾಡುವಷ್ಟು ಆಸಕ್ತಿಯನ್ನು ಬೆಳೆಸಿಕೊಳ್ಳಬೇಕು ಎನ್ನುವುದು ಇದರ ಉದ್ದೇಶ. ಈ ವಂಶಪಾರಂಪರ್ಯದ ಅಧಿಕಾರಿಗಳನ್ನು ಅವರ ಹುದ್ದೆಗಳಲ್ಲಿ ಸ್ಥಿರಪಡಿಸಲು ಕ್ರಮೇಣ ಯಾವುದಾದರೊಂದು ಶೈಕ್ಷಣಿಕ ಅರ್ಹತೆಯು ಅಗತ್ಯ. ಈ ವಿಷಯವು ಬಾಂಬೆ ಸರ್ಕಾರದ ಪರಿಗಣನೆಯಲ್ಲಿದೆ ಎನ್ನುವುದನ್ನು ತಿಳಿದು ನಮಗೆ ತೃಪ್ತಿಯಾಗಿದೆ. ಸರ್ಕಾರದ ಅನೇಕ ಕಾರ್ಯಾಲಯಗಳಲ್ಲಿ ನೇಮಕಗೊಳ್ಳುವ ವ್ಯಕ್ತಿಗಳಿಗೆ ಆ ಪ್ರಾಯೋಗಿಕ ಶಿಕ್ಷಣದ ಪರೀಕ್ಷೆಯನ್ನು ಈಗ ಕಡ್ಡಾಯಗೊಳಿಸಲಾಗುತ್ತಿದೆ.

96. ಮದ್ರಾಸ್‌ನಲ್ಲಿ, ಜನ ಸಮುದಾಯದ ಶಿಕ್ಷಣದ ಪ್ರವರ್ಧನೆಗೆ ಸರ್ಕಾರವು ಹೆಚ್ಚಿನದೇನನ್ನೂ ಮಾಡಿಲ್ಲದಿರುವಾಗ, ತೃಪ್ತಿಯಿಂದ ನಾವು ಗಮನಿಸುವುದೇನೆಂದರೆ, ಇಂಡಿಯಾದ ಯಾವುದೇ ಭಾಗಕ್ಕಿತಲೂ ತಮಿಳರ ಸಮುದಾಯದಲ್ಲಿ ಕ್ರೈಸ್ತಧರ್ಮ ಪ್ರಚಾರಕರ ಶೈಕ್ಷಣಿಕ ಪ್ರಯತ್ನಗಳು ಹೆಚ್ಚು ಯಶಸ್ವಿಯಾಗಿವೆ. ನಮ್ಮ ಶಿಕ್ಷಣ ಯೋಜನೆಯನ್ನು ಅದರ ಸಮಗ್ರತೆಯಲ್ಲಿ ಅಳವಡಿಸಲು ಮದ್ರಾಸ್ ಪ್ರಾಂತ್ಯವು ಒಂದು ಉತ್ತಮಕ್ಷೇತ್ರವನ್ನು ಒದಗಿಸುತ್ತದೆ. ಪ್ರಸ್ತುತ ಸರ್ಕಾರಿಆಂಗ್ಲೊ-ವರ್ನಾಕ್ಯುಲರ್ ಸಂಸ್ಥೆಗಳು ಇಲ್ಲದಂತಹ ಪ್ರದೇಶಗಳಲ್ಲಿ ಮಾತ್ರ ಅವುಗಳನ್ನು ಸ್ಥಾಪಿಸುವ ಮೂಲಕ ಇದನ್ನು ಸಾಧಿಸಬಹುದು. ಅನುದಾನ ಮತ್ತುಇತರ ನೆರವನ್ನು ಸಾಕಷ್ಟು ಒದಗಿಸುವ ಮೂಲಕ ಜನರ ಶೈಕ್ಷಣಿಕ ಬೇಡಿಕೆಗಳನ್ನು ಪೂರೈಸಬಹುದು. ಅಲ್ಲದೆ ಶಿಕ್ಷಣದ ವಿಷಯವನ್ನು ಕುರಿತು ಮಿ. ಡೇನಿಯಲ್‌ಎಲಿಯಟ್ ಅವರು ಇತ್ತೀಚೆಗೆ ನೀಡಿದ ಒಂದು ಅತ್ಯಂತ ಸಮರ್ಥವಾದ ವರದಿಯಲ್ಲಿ ಹೇಳಿರುವುದನ್ನು ನಾವು

ಸಂತೃಪ್ತಿಯಿಂದ ಗ್ರಹಿಸಿದ್ದೇವೆ. ಅದರಂತೆ ದೇಶೀಯ ಶಾಲೆಗಳಿಗೆ ಉತ್ತೇಜನವನ್ನು ಕೊಡಲು ಮಿ. ಥಾಮ್ಸನ್ ಅವರ ಯೋಜನೆಯನ್ನು ಮದ್ರಾಸ್ ಪ್ರಾಂತ್ಯದಲ್ಲಿ ಕೂಡಲೇ ಜಾರಿಗೆ ತರಬೇಕು. ಅಲ್ಲಿ ರೈತವಾರಿ ಇತ್ಯರ್ಥಗಳು ಜನರಿಗೆ ಪ್ರಾಥಮಿಕ ಜ್ಞಾನವನ್ನು ಗಳಿಸಿಕೊಳ್ಳಲು ಅದೇ ರೀತಿಯ ಒಂದು ಪ್ರಾಯೋಗಿಕ ಪ್ರೇರಣೆಯನ್ನು ಒದಗಿಸುತ್ತವೆ.

97. ಇಂಡಿಯಾದ ದೇಶವಾಸಿಗಳ ಶಿಕ್ಷಣದ ವಿಷಯವನ್ನು ಕುರಿತು ನಿಮಗೆ ಹೇಳಬೇಕೆಂದು ನಾವು ಯೋಚಿಸಿದ್ದ ಈ ಅವಲೋಕನಗಳನ್ನು ಈಗ ಮುಕ್ತಾಯಗೊಳಿಸಿದ್ದೇವೆ. ಐರೋಪ್ಯ ಜ್ಞಾನವನ್ನುಎಲ್ಲ ವರ್ಗಗಳ ಜನರಆದ್ಯಂತ ವಿಸ್ತರಿಸಬೇಕೆನ್ನುವುದು ನಮ್ಮ ಉದ್ದೇಶವೆಂದು ನಾವು ಘೋಷಿಸಿದ್ದೇವೆ. ಈ ಉದ್ದೇಶವನ್ನು ಕಾರ್ಯರೂಪಕ್ಕೆತರಲು ಸಂಸ್ಥೆಯ ಉನ್ನತ ಶಾಖೆಗಳಲ್ಲಿ ಇಂಗ್ಲಿಷ್ ಭಾಷೆಯ ಮೂಲಕವೂ ಮತ್ತು ಜನಸಮುದಾಯಕ್ಕೆ ಇಂಡಿಯಾದ ದೇಶೀಯ ಭಾಷೆಗಳ ಮೂಲಕವೂ ಪ್ರಯತ್ನಿಸಬೇಕೆಂದು ನಾವು ತೋರಿಸಿದ್ದೇವೆ. ಸರ್ಕಾರದಿಂದ ಸಾಮಾನ್ಯ ಮೇಲ್ವಿಚಾರಣೆ ಮತ್ತು ಪರಿಶೀಲನೆಯಲ್ಲಿ ನಾವು ನಿರ್ದೇಶಿಸಿದ ವ್ಯವಸ್ಥೆಯನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಕ್ಕೆ ತಂದರೆ, ಅದು ನಿಮ್ಮ ಪ್ರಯತ್ನಗಳಿಗೆ ಕಾರ್ಯದಕ್ಷತೆ ಮತ್ತು ಏಕರೂಪತೆಯನ್ನು ತಂದುಕೊಡುತ್ತದೆ. ವಿಶ್ವವಿದ್ಯಾಲಯಗಳ ಸ್ಥಾಪನೆಯಿಂದ ಮುಕ್ತ ಶಿಕ್ಷಣಕ್ಕೆ ಅತ್ಯುನ್ನತ ಪರೀಕ್ಷೆ ಮತ್ತು ಪ್ರೋತ್ಸಾಹವನ್ನು ಕೊಡಲು ನಾವು ಉದ್ದೇಶಿಸಿದ್ದೇವೆ. ಖಾಸಗಿ ಪ್ರಯತ್ನಗಳಿಗೆ ಅನುದಾನವನ್ನು ಮಂಜೂರು ಮಾಡುವ ಮೂಲಕ ಸರ್ಕಾರಿ ಮತ್ತು ಖಾಸಗಿ ಪರಿಶ್ರಮಗಳಿಗೆ ಮತ್ತು ಖಾಸಗಿ ಸ್ವಾತಂತ್ರ್ಯಕ್ಕೆ ನೆರವನ್ನು ನೀಡಲು ನಾವು ಕರೆಕೊಡುತ್ತಿದ್ದೇವೆ. ಈಗ ಉನ್ನತ ವರ್ಗಗಳು ಕ್ರಮೇಣ ತಮ್ಮ ಮೇಲೇ ತಾವು ಹೆಚ್ಚಾಗಿ ಅವಲಂಬಿತರಾಗಬೇಕೆಂದು ಕರೆಕೊಡಲಾಗುತ್ತದೆ; ಮತ್ತು ನಿಮ್ಮ ಗಮನವನ್ನು ಹೆಚ್ಚು ವಿಶೇಷವಾಗಿ ಮಧ್ಯಮವರ್ಗಗಳು ಮತ್ತು ಕೆಳವರ್ಗಗಳ ಶಿಕ್ಷಣದ ಕಡೆಗೆ ಹರಿಸಬೇಕಾಗುತ್ತದೆ. ಈ ಉದ್ದೇಶಕ್ಕಾಗಿ ಯೋಗ್ಯವಾದ ಶಾಲೆಗಳನ್ನು ಸ್ಥಾಪಿಸುವ ಮೂಲಕ ಇವೆರಡನ್ನೂ ಸಾಧಿಸಬೇಕಾಗುತ್ತದೆ. ಪ್ರತಿಯೊಂದು ಗ್ರಾಮದಲ್ಲೂ ಅನಾದಿಕಾಲದಿಂದ ದೇಶವಾಸಿ ಶಾಲೆಗಳು ಅಸ್ತಿತ್ವದಲ್ಲಿವೆ. ನಮ್ಮ ದೃಷ್ಟಿಯಲ್ಲಿರುವ ಗುರಿಯನ್ನುತಲಪಲು ಅವುಗಳಲ್ಲಿ ಯಾವುವೂ ಪ್ರಯೋಜನವಾಗಲಾರವು. ಹಾಗಾಗಿ ಅವುಗಳಿಗೆ ಎಚ್ಚರಿಕೆಯಿಂದ ಪ್ರೋತ್ಸಾಹವನ್ನು ಕೊಡಬೇಕು. ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ನಿರ್ದಿಷ್ಟವಾದ ಅಂಶಗಳನ್ನು ನಾವು ಗಮನಿಸಿದ್ದೇವೆ. ಈ ವಿಚಾರವಾಗಿ ವಿವಿಧ ಪ್ರಾಂತ್ಯಗಳ ಪರಿಸ್ಥಿತಿಯನ್ನು ಪುನರವಲೋಕನ ಮಾಡಿದ್ದೇವೆ. ಪ್ರತಿಯೊಂದರಲ್ಲೂ ಯಾವುದನ್ನು ಅನುಕರಿಸಬೇಕು ಮತ್ತು ಯಾವುದರಲ್ಲಿ ಕೊರತೆಯಿದೆ ಎಂಬುದನ್ನು ತೋರಿಸುವ ಅಪೇಕ್ಷೆಯಿಂದ ಈ ಅಂಶಗಳನ್ನು ಗಮನಿಸಿದ್ದೇವೆ.

98. ಉಪಸಂಹಾರವಾಗಿ ನಾವು ಸೇರಿಸಬೇಕಾದದ್ದು ಇಷ್ಟೇ: ನಮ್ಮ ಕೈಯಲ್ಲಿರುವ ಈ ಮಹಾನ್ ಉದ್ದೇಶವನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನದಲ್ಲಿ ನೀವು ಹೃತ್ಪೂರ್ವಕವಾಗಿ ಸಹಕರಿಸುತ್ತೀರಿ ಎಂಬ ಶುದ್ಧ ನಂಬಿಕೆಯೊಡನೆ ಈ ವಿಷಯವನ್ನು ನಿಮಗೆ ಒಪ್ಪಿಸುತ್ತಿದ್ದೇವೆ. ಇದನ್ನು ಇಂಡಿಯಾದ ಪ್ರತಿಯೊಂದು ಜಿಲ್ಲೆಯ ಪ್ರಧಾನ ಅಧಿಕಾರಿಗೂ ಅಧಿಕಾರವಾಣಿಯಿಂದ ಕಳುಹಿಸಿಕೊಡಬೇಕು. ಇಲ್ಲಿಂದ ಮುಂದಕ್ಕೆ ಅವರು ಇದು ತಮ್ಮ ಕರ್ತವ್ಯದ ಒಂದು ಮುಖ್ಯವಾದ ಭಾಗ

ಎಂದು ಪರಿಗಣಿಸಬೇಕು. ಇಂಡಿಯಾದ ದೇಶವಾಸಿಗಳೊಡನೆ ಸಾಮಾಜಿಕ ವ್ಯವಹಾರವನ್ನು ಅವರು ಚೆನ್ನಾಗಿ ನಿರ್ವಹಿಸುತ್ತಿದ್ದಾರೆಎಂದು ನಾವು ಸದಾ ಕೇಳಿ ಸಂತೋಷಪಡುತ್ತಿದ್ದೇವೆ .ಅಷ್ಟಾದರೆ ಸಾಲದು. ಶಿಕ್ಷಣದ ವಿಸ್ತರಣೆಯಲ್ಲಿ ನೆರವಾಗಲು ಮತ್ತು ತಮ್ಮ ಅಧಿಕಾರದಲ್ಲಿರುವ ಎಲ್ಲ ಸಾಧನಗಳನ್ನು ಬಳಸಿ ಶಾಲಾ ಇನ್‌ಸ್ಪೆಕ್ಟರುಗಳಿಗೆ ಬೆಂಬಲ ನೀಡಲು ತಮ್ಮ ಉನ್ನತ ಸ್ಥಾನದ ಎಲ್ಲ ಪ್ರಭಾವವನ್ನೂ ಅವರು ಬಳಸುತ್ತಾರೆ ಎಂದು ನಾವು ಭಾವಿಸುತ್ತೇವೆ.

99. ನಾವು ನಿರ್ಧರಿಸಿರುವ ಕ್ರಮಗಳು ಇಂಡಿಯಾದ ಆದ್ಯಂ ಶಿಕ್ಷಣದ ಪ್ರಯೋಜನವನ್ನು ವಿಸ್ತರಿಸಬೇಕೆಂದು ಲೆಕ್ಕಹಾಕಿ ರೂಪಿಸಿದವುಗಳು ಎಂದು ನಂಬುತ್ತೇವೆ. ಆದರೆ ಅದೇ ಸಮಯದಲ್ಲಿ ನಾವು ಇಲ್ಲಿ ಸೇರಿಸಬೇಕಾದುದೇನೆಂದರೆ ಅವುಗಳ ಅಳವಡಿಕೆಯಿಂದ ಅನಾಮತ್ತಾಗಿ ಅಥವಾ ಕ್ಷಿಪ್ರವಾಗಿ ಫಲಿತಾಂಶಗಳು ದೊರೆಯುತ್ತವೆ ಎಂಬ ಆಶಾಭಾವನೆಯನ್ನೇನು ನಾವು ತಾಳುವುದಿಲ್ಲ. ಅಪಾರ ಸಂಖ್ಯೆಯ ಅಜ್ಞಾನಿಗಳಾದ ಜನಸಮೂಹಕ್ಕೆ ಜ್ಞಾನದ ಬಗೆಗೆ ಒಂದು ಸಾಮಾನ್ಯವಾದ ಅಪೇಕ್ಷೆಯನ್ನು ತುಂಬಲು, ಆ ಅಪೇಕ್ಷೆಯ ಲಾಭವನ್ನು ಪಡೆದುಕೊಂಡು ಅದನ್ನು ಉದ್ದೀಪಿಸಿ ಅವರಲ್ಲಿ ಶಿಕ್ಷಣವನ್ನು ಪ್ರಸಾರ ಮಾಡುವ ಸಾಧನವನ್ನು ಸುಧಾರಿಸಲು ಅದು ಅನೇಕ ವರ್ಷಗಳ ಕೆಲಸವಾಗಿರಲೇಬೇಕಾಗುತ್ತದೆ. ದೇವರ ಅನುಗ್ರಹಪೂರ್ಣ ಆಶೀರ್ವಾದವು ಇಂಡಿಯಾದ ಅಪಾರ ಸಂಖ್ಯೆಯ ದೇಶವಾಸಿಗಳ ನೈತಿಕ ಮತ್ತು ಬೌದ್ಧಿಕ ಸುಧಾರಣೆಗೆ ಅಮಿತವಾಗಿ ನೆರವಾಗಲಿ.

100. ಒಂದು ಸರ್ಕಾರವಾಗಿ ನಾವು ಜನರ ಪ್ರಯತ್ನಗಳನ್ನು ನಿರ್ದೇಶಿಸುವುದಕ್ಕಿಂತ ಹೆಚ್ಚಿನದನ್ನು ಮಾಡಲಾರೆವು. ಅವರಿಗೆ ಬಹಳಷ್ಟು ನೆರವಿನ ಅಗತ್ಯಬಿದ್ದಿದೆ ಎಂದು ತೋರಿಬಂದರೆ ಅದನ್ನು ನೀಡಬಹುದು. ಫಲಿತಾಂಶವು ನಮ್ಮ ಪ್ರಯತ್ನಕ್ಕಿಂತ ಅವರ ಪ್ರಯತ್ನವನ್ನೇ ಹೆಚ್ಚು ಅವಲಂಬಿಸಿರುತ್ತದೆ. ಈಗ ನಾವು ಅಳವಡಿಸಿರುವ ಉಪಕ್ರಮಗಳ ಪರಿಣಾಮವಾಗಿ ಕೊನೆಗೂ ಶಿಕ್ಷಣದ ಹೆಸರಿನಲ್ಲಿ ಅಪಾರವಾದ ವೆಚ್ಚವನ್ನುಇಂಡಿಯಾದ ವರಮಾನದಿಂದ ಭರಿಸುವ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಅಥವಾ, ಬೇರೆಯ ಮಾತುಗಳಲ್ಲಿ ಹೇಳುವುದಾದರೆ ಇಂಡಿಯಾದಜನಗಳ ಮೇಲೆ ಈಗ ಇರುವುದಕ್ಕಿಂತ ಹೆಚ್ಚಿನ ತೆರಿಗೆಯನ್ನು ಹೊರಿಸಿದಂತಾಗುತ್ತದೆ. ಅನೇಕ ವರ್ಷಗಳ ಹಿಂದೆ ಸರ್‌ಥಾಮಸ್ ಮನ್ರೊ ಹೇಳಿದ ಮಾತುಗಳನ್ನು ನಾವೂ ಒಪ್ಪುತ್ತೇವೆ. ಈ ಉದ್ದೇಶಕ್ಕಾಗಿ ತಗಲುವ ವೆಚ್ಚವು ``ದೇಶದ ಸುಧಾರಣೆಯಿಂದ ಸಮೃದ್ಧವಾಗಿ ಮರಳಿ ಬರುತ್ತದೆ. ಜ್ಞಾನವನ್ನು ಸಾಮಾನ್ಯವಾಗಿ ಪ್ರಸರಣ ಮಾಡಿದಾಗ ಅದಕ್ಕಂಟಿಕೊಂಡೇ ಹೆಚ್ಚು ಸುಸಂಘಟಿತವಾದ ಹವ್ಯಾಸಗಳು, ಉದ್ಯೋಗಶೀಲತೆಯಲ್ಲಿ ಹೆಚ್ಚಳ, ಜೀವನದ ಸುಖೋಪಭೋಗಗಳ ಪರೀಕ್ಷೆಯ ಅಪೇಕ್ಷೆ ಅವುಗಳನ್ನು ಗಳಿಸಿಕೊಳ್ಳಲು ಪರಿಶ್ರಮ ಮತ್ತು ಜನರ ಉತ್ಕರ್ಷಗಳು ಅನುಸರಿಸಿಕೊಂಡು ಬರುತ್ತವೆ.''

ಇಂತಿನಿಮ್ಮ ಇತ್ಯಾದಿ,

(ಸಹಿ)

ಜೆ. ಒಲಿಫ್ಯಾಂಟ್

ಇ. ಮ್ಯಾಕ್‌ನಾಟೆನ್

ಸಿ. ಮಿಲ್ಸ್

ಆರ್. ಎಲ್ಲೀಸ್

ಟಿ.ಡಬ್ಲ್ಯೂ. ಹಾಬ್

ಆರ್.ಡಿ. ಮ್ಯಾಂಗಲ್ಸ್

ಜೆ.ಪಿ. ವಿಲ್ಲೋಗ್‌ಬಿ

ಜೆ.ಎಚ್. ಆಸ್ಟೆಲ್

ಎಫ್. ಕ್ಯೂರಿ

---

ಶಿಕ್ಷಣ ಇಲಾಖೆಯಿಂದ: ಶೈಕ್ಷಣಿಕ ದಾಖಲೆಗಳ ಆಯ್ದ ಭಾಗಗಳು

ಭಾಗ 2 (1840-1859). ಸಂಪಾದಕರು: ಜೆ .ಎ. ರಿಚೆ.

ಕಲ್ಕತ್ತ: ಸೂಪರಿಂಟೆಂಡೆಂಟ್, ಸರ್ಕಾರಿ ಮುದ್ರಣಾಲಯ, 1922.

ಪುನರ್ಮುದ್ರಣ. ದೆಹಲಿ: ಭಾರತದರಾಷ್ಟ್ರೀಯ ಪತ್ರಾಗಾರ ಇಲಾಖೆ, 1965, 364-393.